ಕರ್ನಾಟಕ ಹಿತೈಷಿಣೀ ಗ್ರಂಥಮಾಲೆಯ
ಪಂಚಮ ಪುಷ್ಪ.

ಸಚಿತ್ರ

## ಪ್ರಪಂಚಧರ್ಮ--ಎರಡನೆಯ ಭಾಗ

# ಪಾರ್ವತಿ

ಇದನ್ನು
ಕರ್ನಾಟಕ ಹಿತೈಷಿಣೀ ಗ್ರಂಥಮಾಲೆಯ ಸಂಪಾದಕರಾದ
**ಶ್ರೀ. ನಾರಾಯಣ ವೆಂಕಟೇಶ ಕುರಡಿ**
ಇವರು ರಚಿಸಿದರು.



ದ್ವಿತೀಯ ಮುದ್ರಣ




**ಬೆಲೆ ೮ ಆಣೆ**

ಶ್ರೀ ಶಂಕರ ಕರ್ನಾಟಕ ಪುಸ್ತಕ ಭಾಂಡಾರ.
ಪ್ರಕಾಶಕರು, ಪುಸ್ತಕ ವ್ಯಾಪಾರಿಗಳು.
ಮಾಳಮಡ್ಡಿ, ಧಾರವಾಡ.

ಇದನ್ನು

ಶ್ರೀ. ಕೆ. ಜಿ. ರಾಯದುರ್ಗ ಇವರು ಧಾರವಾಡದಲ್ಲಿ ತಮ್ಮ
ಜಯಕರ್ನಾಟಕ ಮುದ್ರಣಾಲಯದಲ್ಲಿ ಮುದ್ರಿಸಿದರು.

ಮತ್ತು

ಶ್ರೀ. ನಾರಾಯಣ ವೆಂಕಟೇಶ ಕುರಡಿ ಇವರು ಧಾರವಾಡದಲ್ಲಿ
ಶ್ರೀ ಸರಸ್ವತೀ ಮಂದಿರದಲ್ಲಿ ಪ್ರಕಟಿಸಿದರು.

( ಪ್ರಸ್ತುತ ಗ್ರಂಥದ ಪೂರ್ವಾರ್ಧವಾದ ದಾಕ್ಷಾಯಿಣಿಯ ಪೀಠಿಕೆಯೊಳಗಿನ ಅವತರಣವು. )

" ಹಿಂದೊಂದು ಕಾಲದಲ್ಲಿ ಜಗತ್ತಿನಲ್ಲೆಲ್ಲ ತಾನು ತಾನೆಂದು ಮೆರೆದು ಪ್ರಪಂಚದ ಪ್ರಜೆಗಳಿಗೆಲ್ಲ ಆದರ್ಶವೆನಿಸಿಕೊಂಡ ಆರ್ಯ ಜನಾಂಗದ ಧರ್ಮ, ವಿದ್ಯೆ, ತೇಜಸ್ಸು ಇವೆಲ್ಲ ಇಂದು ಎಲ್ಲಿ ಹೋದುವು ? ಹಿಂದೆ ಸರಸ್ವತಿಯ ತೀರದಲ್ಲಿ ವಾಸವಾಗಿದ್ದಾಗ ವೇದಪಠನದಿಂದ ಮನಶ್ಶಾಂತಿಯನ್ನೈದುತ್ತಿದ್ದ ಆರ್ಯಋಷಿಗಳ ವಂಶಜರೆನಿಸಿಕೊಂಡ ನಾವು ಇಂದು ಸ್ಕಾಟ್, ವರ್ಡ್ಸ್‌ವರ್ಥ್, ಟೆನಿಸನ್ ಸಾಹೇಬರ ಕವಿತೆಗಳನ್ನು ಓದಿ ಸಮಾಧಾನತಾಳಬೇಕಾಗಿದೆ. ಪ್ರಾರಬ್ಧ! ಅಂದಿಗೆ ಅದೇ ಸುಖ, ಇಂದಿಗೆ ಇದೇ ಸುಖ. ಮುಂದೆ ಇನ್ನೂ ಎಂತಹ ಕಾಲ ಮೊದಗುವುದೋ ಯಾರು ಬಲ್ಲರು? ಸಾವಿರ ಮಾತಿನಿಂದೇನು? ಹಿಂದುಗಳಾದ ನಮ್ಮ ಶಿಕ್ಷಣದ ದಿಶೆಯೇ ಬದಲಾಗಿ ಹೋಗಿದೆ. ನಮ್ಮ ನಿಜವಾದ ಸುಧಾರಣೆಯಾಗಬೇಕಾದರೆ ನಮ್ಮವರಿಗೆ ಧಾರ್ಮಿಕ ಶಿಕ್ಷಣವು ಬೇಕೇ ಬೇಕು. ಇತ್ತಿತ್ತಲಾಗಿ ವಿದ್ಯಾಖಾತೆಯ ಅಧಿಕಾರಿಗಳು ಪಾಠಶಾಲೆಗಳಲ್ಲಿ ನೀತಿ ಶಿಕ್ಷಣವನ್ನೂ ಕೊಡಬೇಕೆಂದು ಪ್ರಯತ್ನ ಪಡುತ್ತಿದ್ದಾರಂತೆ. ಧಾರ್ಮಿಕ ಶಿಕ್ಷಣ ಬೇರೆ, ನೀತಿಶಿಕ್ಷಣ ಬೇರೆ ಹೀಗಾದರೆ ಅದರಿಂದ ಆಗತಕ್ಕಷ್ಟು ಪ್ರಯೋಜನವು ಎಂದೂ ಆಗದು. ನಮ್ಮವರ ನೀತಿ ಸುಧಾರಣೆಯಾಗಬೇಕಾದರೆ ನಾವು ನಮ್ಮ ಹಿರಿಯರು ಹಾಕಿಕೊಟ್ಟ ಮೇಲ್ಪಂಕ್ತಿಯನ್ನೇ ತೀಡಬೇಕು.

ನಮ್ಮ ಪುರಾಣಗಳು ನೀತಿತತ್ತ್ವಗಳ ಆಗರಗಳು; ಪ್ರಜೆಗಳ ನೀತಿ ಸುಧಾರಣೆಯೇ ಅವುಗಳ ಉದ್ದೇಶ. ಆದರೆ ಕಾಲಮಹಿಮೆಯಿಂದ ನಮ್ಮ ಪುರಾಣಗಳು ಹಾಳುದೇಗುಲಗಳಂತಾಗಿವೆ. ಆದುದರಿಂದ ನಮ್ಮವರಿಗೆ ಅಲ್ಲಿ ಹೋಗಿ ದೇವತಾದರ್ಶನ ಪಡೆಯಲು ಮನಸ್ಸು ಮೆಚ್ಚದು. ಹೀಗೆ ಇಚ್ಛೆ ಇಲ್ಲದವರನ್ನು ಮನವೊಲಿಸಿ ಒಳಗೆ ಗರ್ಭಾಲಯದ ವರೆಗೆ ಕರೆದೊಯ್ದು ದೇವದರ್ಶನ ಮಾಡಿಸುವ ಪುಣ್ಯಾತ್ಮರಾದ ಪುರಾಣಿಕರೂ ತೀರ ವಿರಳ. ಅಂತಹ ಕೀರ್ತನಕಾರರೂ ಕಡಿಮೆ. ಪುರಾಣವಸ್ತುಗಳ ಮೇಲೆ ನಮಗೆ ಮಮತೆಯಿಲ್ಲ. ಕಾಲಕ್ಕೆ ಅನುಸರಿಸಿ ನವೀನ ವಸ್ತುಗಳನ್ನು ನಿರ್ಮಿಸುವ ಶಿಲ್ಪಿಗರೂ ದುರ್ಲಭರು. ಇಂತಹ ಪರಿಸ್ಥಿತಿಯ ಕೂಡ ನಾವು ಕಾದಾಡಬೇಕಾಗಿದೆ. ಆದುದರಿಂದ ಕಾಲಾನುರೋಧದಿಂದ ನಮ್ಮ ಕೈಲಾದಮಟ್ಟಿಗೆ ಉಪಾಯಗಳನ್ನು ಹುಡುಕಿ ನಮ್ಮ ಬಾಲಕ ಬಾಲಿಕೆಯರಲ್ಲಿ ಧಾರ್ಮಿಕ ಕಲ್ಪನೆಯ ಅಂಕುರಗಳನ್ನು ಒಡೆಯಿಸಿ ವಿಚಾರಜಲಸೇಚನೆಯಿಂದ ಅವನ್ನು ಬೆಳೆಯಿಸುವುದು ವಿಶೇಷಜ್ಞರ ಕರ್ತವ್ಯವು. ಈ ಕರ್ತವ್ಯವನ್ನು ಸ್ಮರಿಸಿ, ಈ ನಮ್ಮವರ ರುಚಿವೈಚಿತ್ರ್ಯವನ್ನು ಲಕ್ಷ್ಯದಲ್ಲಿ ತಂದುಕೊಂಡು ಕರ್ನಾಟಕ ಚಿಂತಾಮಣಿ ಗ್ರಂಥಮಾಲೆಯ ಸಂಪಾದಕರು ವ್ಯವಸಾಯಾಂತರದಲ್ಲಿ ಸಿಲುಕಿಕೊಂಡಿದ್ದರೂ ಪ್ರಸಿದ್ಧವಾದ ಪೌರಾಣಿಕ ಮತ್ತು ಐತಿಹಾಸಿಕ ಕಥೆಗಳಿಗೆ ಆಧುನಿಕ ಸ್ವರೂಪವನ್ನು ಕೊಟ್ಟು ನಮ್ಮ ಕರ್ನಾಟಕದ ಬಾಲಬಾಲಿಕೆಯರ ಮುಂದಿರಿಸುವ ಸ್ತುತ್ಯವಾದ ಕಾರ್ಯವನ್ನು ಕೈಕೊಂಡಿರುವರು. ಕರ್ನಾಟಕ ಸಮಾಜಬಂಧುಗಳು ಈ ಮಾತನ್ನು ನೆನೆದುಕೊಂಡು ಅವರ ಕಾರ್ಯಕ್ಕೆ ಮನಮುಟ್ಟಿ ಸಹಾಯಮಾಡಬೇಕೆಂದು ನಮ್ಮ ಆಗ್ರಹದ ಸೂಚನೆ. "

---

ಮೊದಲನೆಯ ಭಾಗವಾದ **ದಾಕ್ಷಾಯಿಣಿ**ಯನ್ನು ಓದಿದ ಮಹನೀಯರಲ್ಲಿ ಕೆಲ ವರು ಇದೇನು ಪುರಾಣವೋ ಕಾವ್ಯವೋ ಕಾದಂಬರಿಯೋ ಎಂದು ಕೇಳಿದರು. ಅದಕ್ಕೆ ನಾನು ಈ ಮೂರೂ ಸಮ್ಮಿಶ್ರವಾಗಿರುವುದೆಂದು ಉತ್ತರವನ್ನು ಹೇಳಬೇಕಾಯಿತು. ಇದೇ ಮಾತು ಪ್ರಸ್ತುತ ಗ್ರಂಥಕ್ಕೂ ಸಲ್ಲುವುದು. ಗ್ರಂಥದಲ್ಲಿ ಬಂದಿರುವ ಕಥಾಭಾಗಕ್ಕೆ **ಶಿವಪುರಾಣವು** ಆಧಾರವಾಗಿದೆ. ಒಂದೆರಡು ಕಡೆಗಳಲ್ಲಿ ಮಾತ್ರ ಅನಿರ್ವಾಹಕ್ಕಾಗಿ ಅಲ್ಪವ್ಯತ್ಯಾಸವನ್ನು ಮಾಡ ಬೇಕಾಯಿತು. ಮತ್ತು ಇದರೊಳಗಿನ ವರ್ಣನಾತ್ಮಕವಾದ ಭಾಗಕ್ಕೆ **ಗಿರಿಜಾಕಲ್ಯಾಣ, ಕುಮಾರಸಂಭವ**ಗಳೆಂಬ ಕಾವ್ಯಗಳು ಆಶ್ರಯವಾಗಿವೆ. ಆದುದರಿಂದ ನಮ್ಮ ಪ್ರಾಚೀನರ ಕಮಲಭ್ರಮರ ಕದಂಬವೃಕ್ಷಗಳು ಬರಲೇಬೇಕಾಯಿತು. ಅಲ್ಲದೆ ಕೇವಲ ವಾಚಕರ ಮನೋ ರಂಜನೆಯನ್ನೇ ಅಲ್ಲದೆ ಶ್ರೇಷ್ಠವಿಚಾರಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಬರೆದಿರುವ ಕಾದಂಬ ಗಳಲ್ಲಿ ಕಂಡುಬರುವ ನೀತಿಪ್ರತಿಪಾದನೆಯು ಗ್ರಂಥದ ಒಂದೊಂದು ಭಾಗದಲ್ಲಿಯೂ ಕಂಡ ಬರುವಂತೆ ಯತ್ನಿಸಿರುವೆನು. **ಪ್ರಪಂಚಧರ್ಮ**ವೆಂಬ ಹೆಸರಿಗೆ ತಕ್ಕಂತೆ ಪ್ರಪಂಚ ದೊಳಗಿನ ಪ್ರಾಮುಖ್ಯವಾದ ಗೂಢರಹಸ್ಯಗಳನ್ನು ಇದರಲ್ಲಿ ವಿವರಿಸಲು ಯತ್ನಿಸಿರುವೆನೆಂದ ಪುನಃ ಅರಿಕೆಮಾಡಿಕೊಂಡು ಗುಣದೋಷಗಳ ವಿಮರ್ಶೆಯನ್ನು ಪಾಠಕಮಹಾಶಯರಿಗೆ ಒಪ್ಪಿ ಈ ನನ್ನ ಚಿಕ್ಕ ಪೀಠಿಕೆಯನ್ನು ಮುಗಿಸುವೆನು.

ವಿಜಯ ದಶಮಿ, ೧೮೪೦ } ವಿದ್ವಜ್ಜನವಿಧೇಯ,

ಶ್ರೀ. ಸರಸ್ವತೀಮಂದಿರಮ್; ವಿಜಾಪುರ } —**ನಾರಾಯಣ.**

---

## ಅನುಕ್ರಮಣಿಕೆ.



---

# ಎರಡನೆಯ ಮುದ್ರಣ.



ಪರಮದಯಾಘನ ಪಾರ್ವತೀ ಪರಮೇಶ್ವರರ ಕರುಣೆಯಿಂದಲೂ ಕರ್ಣಾಟಕ ಜನತಾ ಜನಾರ್ದನನ ದಯೆಯಿಂದಲೂ ಪ್ರಸ್ತುತ ಪುಸ್ತಕದ ಎರಡನೆಯ ಮುದ್ರಣದ ಕಾರ್ಯವನ್ನು ಕೈಕೊಳ್ಳುವ ಸುಯೋಗವು ಒದಗಿ ಬಂದಿತು. ಈ ಸಂದರ್ಭದಲ್ಲಿ ಗ್ರಂಥದ ಅಂತರ್ಬಾಹ್ಯಗಳ ಗುಣ ಸೌಂದರ್ಯ ಗಳನ್ನು ಹೆಚ್ಚಿಸುವುದಕ್ಕೆ ನನ್ನಿಂದಾದಷ್ಟು ಯತ್ನಿಸಿರುವೆನು. ಮೊದಲನೆಯ ಮುದ್ರಣದಲ್ಲಿ ಕಂಡುಬಂದ ದೋಷಗಳನ್ನೆಲ್ಲ ಸರಿಪಡಿಸಿದುದಲ್ಲದೆ ಅಖಿಲ ಕರ್ಣಾಟಕದ ವಾಚಕರಿಗೂ ಮಾನ್ಯವಾದ ಹಲವು ತಿದ್ದುಪಡಿಗಳನ್ನು ಸೇರಿ ಸಿರುವೆನು. ಈ ಸಮಯದಲ್ಲಿ ಗ್ರಂಥವನ್ನು ಸಾದ್ಯಂತವಾಗಿ ಓದಿ ನೋಡಿದ ನನ್ನ ಸ್ನೇಹಿತರೂ ಹಿತೇಚ್ಛುಗಳೂ ಆದ ಶ್ರೀ. ಪಂಡಿತ ಪೂಜಾರ ಮಹಾದೇವ ಶಾಸ್ತ್ರಿಗಳು ಮತ್ತು ಕರ್ಣಾಟಕ ಕಾಲೇಜಿನ ಪ್ರೊಫೆಸರ ಶ್ರೀ. ಚೆನ್ನಕೇಶವ ಅಯ್ಯಂಗಾರರು ಬಿ. ಏ. ಇವರು ಹಲವು ಮಾರ್ಪಾಡುಗಳನ್ನು ಸೂಚಿಸಿದರು. ಗ್ರಂಥಾರಂಭದಲ್ಲಿಯ **ಮಹಾದೇವನ** ಸುಂದರವಾದ ಬಣ್ಣದ ಚಿತ್ರವು ಚಿತ್ತಾಕರ್ಷಕವಾಗಿದೆ. ಒಳ್ಳೆಯ ಬೆಂಡು ಕಾಗದದಲ್ಲಿ ಜಯಕರ್ನಾಟಕದ ಸುಂದರವಾದ ಅಚ್ಚು ಕೂಟದಲ್ಲಿ ಅಚ್ಚು ಹಾಕಿಸಿರುವೆನು.

**ಕನ್ನಡದ ಏಕೀಕರಣವೇ ನಮ್ಮ ಗುರಿ.** ಪ್ರಾಕೃತಿಕ ರಾಜಕೀಯ ಮುಂತಾದ ಭಿನ್ನ ಭಿನ್ನ ಪರಿಸ್ಥಿತಿಗಳಿಂದ ಚದರಿಹೋದ ಕನ್ನಡಿಗರಲ್ಲಿ ಬಳಕೆ ಕಡಿಮೆಯಾದುದರಿಂದಲೂ ಸ್ಥಾನಿಕ ಪರಭಾಷಾ ಸಂಪರ್ಕದಿಂದಲೂ ಕನ್ನಡ ದಲ್ಲಿ ಮೈಸೂರು ಮಂಗಳೂರು ಧಾರವಾಡ ಮುಂತಾದ ಪ್ರಾಂತಭೇದಗಳು ಹುಟ್ಟಿ ಬೆಳೆದುವು. ಇರಇರುತ್ತ ಗ್ರಾಂಥಿಕ ಭಾಷೆಯಲ್ಲಿಯೂ ಈ ಭೇದವು ತಲೆದೋರಿತು. ಗ್ರಂಥಸ್ಥವಾದ ಕನ್ನಡದಲ್ಲಿ ಈ ತೆರದ ಭೇದಭಾವವಿರು ವುದು ನಮ್ಮ ಸಾಹಿತ್ಯಕ್ಕೆ ಹಿತಕಾರಿಯಲ್ಲ; ಅಹಿತಕಾರಿಯೇ ಆಗಿದೆ. ಆದುದ ರಿಂದ ಈ ಭೇದವನ್ನು ದೂರ ಮಾಡಬೇಕೆಂದು ಇಂದಿನ ಕನ್ನಡಿಗರು ಹಂಬಲಿ ಸುತ್ತಲೂ ಇದ್ದಾರೆ. ನಾವು ಈ ಧ್ಯೇಯವನ್ನೇ ಗುರಿಯಾಗಿಟ್ಟುಕೊಂಡು ೧೩-೧೪ ವರ್ಷಗಳಿಂದಲೂ ಕೆಲಸ ಮಾಡುತ್ತ ಬಂದೆವು. ಅಖಿಲಕರ್ಣಾಟಕದ ಮುಂದಾಳುಗಳು ಈ ವಿಷಯದಲ್ಲಿ ನಮಗೆ ನೆರವಾಗುತ್ತಲೂ ಇದ್ದಾರೆ.

ಈ ಏಕೀಕರಣದ ವಿಚಾರವನ್ನು ಮೊತ್ತಮೊದಲು ನನ್ನ ಮನಸ್ಸಿನಲ್ಲಿ ತುಂಬಿದವರು ಬೆಂಗಳೂರಿನ ಶ್ರೀ. **ಬಿ. ವೆಂಕಟ ನಾರಾಯಣಪ್ಪನವರು.** ನಾನು ಮೊದಲನೆಯ ಸಲ ಅವರನ್ನು ನೋಡಿದ್ದು ಸನ್ ೧೯೧೮ ರಲ್ಲಿ ಧಾರವಾಡದಲ್ಲಿ ನೆರೆದ ಕರ್ಣಾಟಕ ಸಾಹಿತ್ಯಸಮ್ಮೇಲನದಲ್ಲಿ. ಅಂದಿನಿಂದ ಇಂದಿನವರೆಗೂ ಅವರು ಈ ನನ್ನ ಕೆಲಸಕ್ಕೆ ಪರಿಪರಿಯಿಂದ ನೆರವಾಗಿದ್ದಾರೆ. ಕರ್ಣಾಟಕ ಸಾಹಿತ್ಯದ ಉತ್ಕರ್ಷವೇ ಆ ಮಹನೀಯರ ಧ್ಯೇಯ. ಆ ಧ್ಯೇಯ ಸಾಧನೆಗಾಗಿ ಆರು ಆವಾಗ ಎಷ್ಟು ನೆರವನ್ನು ಕೋರಿದರೂ ಅದನ್ನವರು ಪೂರೈಸಲು ಸದಾಸಿದ್ಧರು. ಇದೀಗ ನಾನು ಮನಸ್ಸು ಬಿಚ್ಚಿ ಆಡಿದ ಮಾತು. ಅವರ ಇಂತಹ ಸುದುದ್ದೇಶ ಪ್ರೇರಿತವಾದ ಸತ್ಕಾರ್ಯದ ನಿದರ್ಶನವೆಂದು ಈ ಚಿಕ್ಕ ಪುಸ್ತಕವನ್ನು ಅವರಿಗೆ ಅರ್ಪಿಸಿರುವೆನು. ಕನ್ನಡಿಗರೆಲ್ಲರೂ ಆ ಮಹನೀಯರಿಗೆ ತುಂಬ ಕೃತಜ್ಞರಾಗಿರಬೇಕೆಂಬುದೇ ಈ ಚಿಕ್ಕ ಸಮರ್ಪಣೆಯ ಗುಟ್ಟು. ಭಗವಂತನು ಆ ಮಹನೀಯರಿಗೆ ಆಯುರಾರೋಗ್ಯ ಭಾಗ್ಯಗಳನ್ನು ದಯ ಪಾಲಿಸಿ ಕರ್ಣಾಟಕ ಮಾತೆಯ ಸೇವೆಯನ್ನು ಸಾಂಗಗೊಳಿಸಲಿ.

ಈ ನನ್ನ ತಾಯ್ನುಡಿಯ ತಾಯ್ನಾಡಿನ ಸೇವೆಯ ಕಾರ್ಯಕ್ಕೆ ನೆರವಾದ ಎಲ್ಲ ಮಹನೀಯರಿಗೆ ಸವಿನಯ ವಂದನೆಗಳನ್ನು ಸಮರ್ಪಿಸಿ, ಶರಣಾಗತ ವತ್ಸಲನೂ ಭವಸಾಗರ ತಾರಕನೂ ಆದ ಮೃತ್ಯುಂಜಯ ಮಹಾದೇವನನ್ನು,

**“ ಹರಿಯೆ ನಿನ್ನೊಳು ಭಕ್ತಿ ಮುಕ್ತಿಗೆ।**
**ಸರಳ ಮಾರ್ಗವದೆಂಬುದರಿಯದೆ।**
**ತಿರು ತಿರುಗಿ ಮಾಯಾ ಪ್ರಪಂಚದಿ ಸುತ್ತಿ ಬೇಸತ್ತೆ ॥**
**ಪರಮಭಕ್ತಿಯೊಳೀಗ ನಿನ್ನಯ।**
**ಚರಣತಲದಲಿ ಬಿದ್ದು ಬೇಡುವೆ।**
**ಪರಿಹರಿಸೊ ನರಜನ್ಮವನು ಕೊಂಡೀ ಸುಮಾಂಜಲಿಯ ॥ ”**

ಹೀಗೆಂದು ಪ್ರಾರ್ಥಿಸಿ ಪ್ರಸ್ತುತಕ್ಕೆ ವಿರಮಿಸುವೆನು.

ಶ್ರೀ. ಸರಸ್ವತೀ ಮಂದಿರಮ್ ಧಾರವಾಡ.
ಮಕರ ಸಂಕ್ರಮಣ, ೧೯೩೩.

**—ನಾರಾಯಣ.**

# DEDICATED

TO

**B. VENKATANARAYANAPPA,**

ESQUIRE M. A.,

RETIRED PROF. OF PHYSICS, BANGALORE.,

*in token of esteem for his interest in the development of Kannada Literature.*






मृत्युंजय महादेव त्राहि मां शरणागतम् ।
जन्ममृत्युजराव्याधिपीडितं कर्मबन्धनैः ॥

Indian Art Press, Bombay, 2.

|| ಶ್ರೀಃ ||

# ಪಾರ್ವತಿ

## ಮೊದಲನೆಯ ಪರಿಚ್ಛೇದ

## ಮಹಾದೇವ

ಪರಮಸ್ವಾಮಿ ಜಟಾಧರಂ, ಶಶಿಧರಂ ಗಂಗಾಧರಂ, ಕಾಲಸಂ |
ಹರನಜ್ಞಾನಹರಂ, ಪುರತ್ರಯಹರಂ, ಸೌಖ್ಯಾಕರಂ. ಶಂಭುಶಂ ||
ಕರನಾನಂದಕರಂ ಸಮಂತೆಮಗೆ ಭಕ್ತಿಜ್ಞಾನವೈರಾಗ್ಯಮಂ |
ಕರುಣಂಗೆಯ್ಗೊಲವಿಂದೆ ಹಂಪೆಯ ವಿರೂಪಾಕ್ಷಂ ಶಿವಾವಲ್ಲಭಂ ||



ರಮ ದಯಾಘನನಾದ ಶ್ರೀಶಂಕರನ ದಯೆಯಿಂದ ದಕ್ಷಬ್ರಹ್ಮನು ಪುನರ್ಜೀವಿತನಾದನು. ಆತನ ಪತ್ನಿಯು ಪುನಃ ಶಂಕರನ ಪಾದಗಳಿಗೆರಗಿ ಕ್ಷಮೆಯನ್ನು ಬೇಡಿಕೊಂಡಳು. ಸತಿಯ ಅವತಾರ ಸಮಾಪ್ತಿಯಿಂದ ಅವಳಿಗೆ ಅತಿಶಯ ದುಃಖವಾಯಿತು. ಆದರೆ ಮಾಡುತ್ತಾಳೇನು? ಪತಿಯ ದುಷ್ಕೃತಿಯ ಫಲವನ್ನು ಅವಳೂ ಅನುಭವಿಸಬೇಕಾಯಿತು. ದಕ್ಷಬ್ರಹ್ಮನ ಅಹಂಕಾರವೆಲ್ಲ ಅಳಿದು ಹೋಯಿತು. ಆತನ ಮುಖವನ್ನು ಎತ್ತಿಕೊಂಡು ಬಾಳುವೆ ಮಾಡುವುದು ಆತನಿಗೆ ತುಂಬ ಅಸಹ್ಯ

ವಾಗಿತ್ತು. ಆದರೂ ಸುಖದ ಸಂಸಾರವನ್ನು ಬಿಟ್ಟು ಸಾಯಲಾರದೆ ಅಂತಹ ಅಪಮಾನವನ್ನು ಕೂಡ ಸಹಿಸಿಕೊಂಡು ಬಾಳುವೆ ಮಾಡತೊಡಗಿದನು. ಅಪಮಾನ ಮೂಲಕವಾದ ದುಃಖದಿಂದ ಮನಸ್ಸಿನಲ್ಲಿ ಹುಟ್ಟಿದ ವಿರಕ್ತಿಯು ಆತಗಿ ಕಷ್ಟದಲ್ಲಿಯೇ ಸುಖವನ್ನು ಕಲ್ಪಿಸಿಕೊಂಡನು. ದುರಹಂಕಾರದ ದುಷ್ಪರಿಣಾಮದ ಉದಾಹರಣೆ ಮೂರೂ ಲೋಕಗಳ ಕಣ್ಣಮುಂದೆ ಕಟ್ಟಿ ದಂತಾಯಿತು.

ಸತಿಯ ವಿಯೋಗದ ದುಃಖದಿಂದಲೂ ದಕ್ಷಬ್ರಹ್ಮನ ದುರಹಂಕಾರದ ಕೋಪದಿಂದಲೂ ಮೈಮರೆತ ಶಂಕರನು ಯಜ್ಞಮಂಟಪದಲ್ಲಿ ಕಂಡಕಡೆಗೆ ತಿರುಗಲಾರಂಭಿಸಿದನು. ಆತನ ಅತ್ಯುಗ್ರವಾದ ಕೋಪಾಗ್ನಿಯಿಂದ ಜಗತ್ತೆಲ್ಲ ಸುಟ್ಟುಹೋಗುವಂತೆ ತೋರಿತು. ಅಷ್ಟರಲ್ಲಿ ಅಕಸ್ಮಾತ್ತಾಗಿ ಆತನು ಸತಿಯ ಮೃತದೇಹವು ಬಿದ್ದಿರುವ ಯಜ್ಞಕುಂಡದ ಸಮೀಪಕ್ಕೆ ಪುನಃ ಹೋದನು. ತನ್ನ ಪ್ರೀತಿಯ ಪತ್ನಿಯ ದೇಹವನ್ನು ಕಂಡೊಡನೆಯೇ ಆತನ ಮನಸ್ಸಿನ ಸ್ಥಿತಿಯು ಒಮ್ಮಿಂದೊಮ್ಮೆ ಬದಲಾಯಿತು. ಉರಿಯುತ್ತಿರುವ ಬೆಂಕೆಯಲ್ಲಿ ಆಕಸ್ಮಿಕವಾಗಿ ನೀರು ಸುರಿದರೆ ಭಸ್ಸೆಂದು ಬೆಂಕೆಯು ಆರಿ ಸುತ್ತಲೂ ಕತ್ತಲೆಗವಿಯುವಂತೆ ಶಂಕರನ ಕೋಪಾಗ್ನಿಯು ತಟ್ಟನೆ ಶಾಂತವಾಯಿತು; ಆತನು ಉಸಿರ್ಗರೆದು ದೊಪ್ಪನೆ ನೆಲಕ್ಕೆ ಕುಸಿಕೂತು ಸತಿಯ ಮೃತದೇಹವನ್ನು ತೊಡೆಯ ಮೇಲೆತ್ತಿಕೊಂಡನು. ಸತಿಯ ಅನುಪಮವಾದ ಪ್ರೀತಿಯಿಂದ ಸದಾಸುಖಿಯಾದ ಶಂಕರನಿಗೆ ಮುಂದಿನ ಕಾರ್ಯವೇ ತೋರದಂತಾಯಿತು. ಎಷ್ಟೇ ವಿವೇಕಿಯಾಗಿದ್ದರೂ ಅಕಸ್ಮಾತ್ತಾಗಿ ಬಹು ದೊಡ್ಡ ಕಷ್ಟವು ಒದಗಿದೊಡನೆ ಆತನಿಗೆ ಮುಂದಿನ ಮಾರ್ಗವು ತೋರದ ಹಾಗಾಗುವುದು ಸ್ವಾಭಾವಿಕ. ಮನಸ್ಸು ಶಾಂತವಾಗಿರುವಾಗ ಮಾತ್ರ ಅದಕ್ಕೆ ಯೋಗ್ಯಾಯೋಗ್ಯ ವಿಚಾರಗಳೂ ಕರ್ತವ್ಯಾಕರ್ತವ್ಯಗಳೂ ಸೂಚಿಸುವುವು. ಶಂಕರನಿಗೆ ಅಳಬೇಕೋ, ಕೋಪಗೊಳ್ಳಬೇಕೋ, ಏನು ಮಾಡಬೇಕೋ ಅದೇ ತಿಳಿಯಲಿಲ್ಲ. ಒಮ್ಮೆ ಪ್ರೀತಿಯ ಸತಿಯ ಸಹವಾಸದಲ್ಲಿರುವಾಗಿನ ಸುಖಮಯವಾದ ಸಂದರ್ಭಗಳೆಲ್ಲ ನೆನಪಾಗುವುವು; ಅದರಿಂದ ಮನಸ್ಸಿಗೆ ಹೇಳಲಾರದಷ್ಟು ದುಃಖವಾಗಿ ಕಣ್ಣೀರು ಸುರಿಯುವುದು. ಪರಕ್ಷಣದಲ್ಲಿಯೇ ದಕ್ಷನ ಅವಿವೇಕ ದುರಹಂಕಾರ ದುಷ್ಕೃತಿಗಳ ನೆನಪಾಗಿ ಮನ

ಸ್ಸಿನಲ್ಲಿ ಹಿಡಿಸಲಾರದಷ್ಟು ಸಂತಾಪವಾಗಿ ಕಣ್ಣುಗಳಿಂದ ಕಿಡಿಗಳು ಉದಿರುವುವು. ಆತನ ಮುಂದೆ ಬಂದು ಯಾರಿಗೂ ಧೈರ್ಯವಿಲ್ಲ.

ಈ ರೀತಿ ಶಂಕರನು ದುಃಖಸಂತಾಪಗಳಿಂದ ಉನ್ಮತ್ತನಾಗಿ ಸ್ವಲ್ಪ ಹೊತ್ತು ಅಲ್ಲಿಯೇ ಕುಳಿತು ಕೊನೆಗೆ ಸತಿಯ ಮೃತ ದೇಹವನ್ನು ಎತ್ತಿಕೊಂಡು ಕಂಡ ಕಡೆಗೆ ಹೊರಟನು. ತಾನು ಯಾರು, ಏನು ಮಾಡುತ್ತೇನೆ, ಎಲ್ಲಿಗೆ ಹೋಗುತ್ತೇನೆ, ಮುಂತಾದ ಯಾವ ವಿಚಾರವೂ ಆತನ ಮನಸ್ಸಿನಲ್ಲಿರಲಿಲ್ಲ. ಜ್ಞಾನಿಯು ಈಶ್ವರನಲ್ಲಿ ಮನಸ್ಸನ್ನಿಟ್ಟು ಯೋಗಾರೂಢನಾದಾಗ ಈ ಜಗತ್ತನ್ನು ಮರೆತು ಬಿಟ್ಟು ಸುಖದುಃಖಗಳನ್ನೂ ಸರ್ವವನ್ನೂ ಕಡೆಗಣಿಸಿ ಆತನೊಡನೆ ತನ್ಮಯನಾಗುವನು. ಅದರಂತೆ ತನ್ನ ಪ್ರೀತಿಯ ಸತಿಯಲ್ಲಿ ಮನಸ್ಸನ್ನಿಟ್ಟ ಶಂಕರನು ಜಗತ್ತನ್ನು ಮರೆತು ತನ್ಮಯನಾಗಿ ಬಿಟ್ಟನು. ಹಳ್ಳಕೊಳ್ಳ, ಗಿರಿಗಂಹರ, ಮನೆಮಾರು, ಊರುಕೇರಿ, ಹಗಲಿರುಳು, ಚಳಿಮಳೆ, ಬಿಸಿಲುಬೇಗೆ, ಹಸಿವುನೀರಡಿಕೆ, ಇವುಗಳಲ್ಲಿ ಯಾವುದೂ ಆತನ ಲಕ್ಷ್ಯಕ್ಕೆ ಬರಲೊಲ್ಲದು. ಇದನ್ನು ಕಂಡು ದೇವತೆಗಳು ಕಂಗೆಟ್ಟರು; ಜಗಚ್ಚಾಲಕರಾದ ತ್ರಿಮೂರ್ತಿಗಳಲ್ಲಿ ಒಬ್ಬನಾದ ಶಂಕರನು ತನ್ನ ಕರ್ತವ್ಯವನ್ನು ಮರೆತುಬಿಟ್ಟರೆ ಮುಂದೇನು ಗತಿಯೆಂದು ಅವರೆಲ್ಲರೂ ಚಿಂತಿಸತೊಡಗಿದರು. ಬ್ರಹ್ಮ ವಿಷ್ಣು ಮಹೇಶ್ವರರು ಪರಸ್ಪರರನ್ನು ಅವಲಂಬಿಸಿರುವರು. ಮೂವರಲ್ಲಿ ಒಬ್ಬನು ಈ ರೀತಿ ಕರ್ತವ್ಯಶೂನ್ಯನಾಗಿ ತನ್ನ ಶಕ್ತಿಯನ್ನು ಕಳೆದುಕೊಂಡು ಬಿಟ್ಟರೆ ಉಳಿದವರಿಬ್ಬರೂ ತಮ್ಮ ಕರ್ತವ್ಯವನ್ನು ಜರುಗಿಸಲಾರರು. ಅವರ ಶಕ್ತಿ ತಾನಾಗಿಯೇ ಕುಂದಿ ಹೋಗುವುದು. ಬ್ರಹ್ಮವಿಷ್ಣುಗಳೂ ಶಕ್ತಿಹೀನರಾಗಿ ತಮ್ಮ ಕರ್ತವ್ಯವನ್ನು ಕೊನೆಗಾಣಿಸಲಾರರು. ಇಡೀ ಜಗತ್ತೇ ಈ ಆಲೋಚನೆಯಲ್ಲಿ ತೊಡಗಿತು. ದೇವತೆಗಳೆಲ್ಲರೂ ಒಂದಾಗಿ ಬ್ರಹ್ಮದೇವನೆಡೆಗೆ ಹೋದರು; ಬ್ರಹ್ಮದೇವನು ಕೂಡ ಏನೂ ಉಪಾಯ ತೋರದೆ ಅವರೊಡನೆ ಮಹಾವಿಷ್ಣುವಿನ ಬಳಿಗೆ ಹೋದನು. ಕೊನೆಗೆ ಎಲ್ಲರೂ ಕೂಡಿ ಸತಿಯ ದೇಹವು ಶಂಕರನ ಕಣ್ಮರೆಯಾಗುವಂತೆ ಮಾಡಿದರೆ ಆತನು ಶಾಂತನಾಗಿ ತನ್ನ ಕರ್ತವ್ಯವನ್ನು ಕೈಕೊಳ್ಳಬಹುದೆಂದೂ, ಮಹಾವಿಷ್ಣುವು ಯುಕ್ತಿಯಿಂದ ಈ ಕೆಲಸವನ್ನು ಮಾಡಬೇಕೆಂದೂ ನಿರ್ಣಯಿಸಿದರು. ಅದರಂತೆ ಶಂಕರನನ್ನು ಅನುಸರಿಸಿ ಹೋಗಿ ಆತನಿಗೆ ತಿಳಿಯದಂತೆ ಸತಿಯ ದೇಹವನ್ನು ತನ್ನ ಸುದರ್ಶನದಿಂದ

ತುಂಡುತುಂಡಾಗಿ ಕಡಿದು ಕೆಡಹಿದನು. ಆ ತುಂಡುಗಳು ಒಂದೊಂದಾಗಿ ಭೂಮಿಯ ಮೇಲೆ ಬೀಳುವಾಗ ಶಂಕರನ ಶರೀರದಿಂದ ಒಂದೊಂದು ಪ್ರಕಾಶಮಾನವಾದ ತೇಜಸ್ಸಿನ ರಾಶಿಯು ಹೊರಬಿದ್ದು ಅವುಗಳ ಸಂಗಡ ಭೂಮಿಗೆ ಬಿದ್ದಿತು. ಈ ತುಂಡುಗಳು ಬಿದ್ದ ಸ್ಥಳಗಳಲ್ಲಿ ಒಂದೊಂದು ಜ್ಯೋತಿರ್ಲಿಂಗಗಳು ಉಂಟಾದುವು. ಅವು ಈ ನಮ್ಮ ಭರತಖಂಡದಲ್ಲಿ ಇಂದಿಗೂ ವಿಖ್ಯಾತವಾಗಿ ಮೆರೆಯುತ್ತಲಿವೆ. ಈ ರೀತಿ ಸತಿಯ ಸಂಪೂರ್ಣ ಶರೀರವು ಭೂಮಿಗೆ ಬಿದ್ದು ಹೋಗುವವರೆಗೂ ಉನ್ಮತ್ತನಾದ ಶಂಕರನಿಗೆ ಅದರ ಅರಿವೇ ಇರಲಿಲ್ಲ. ಕೊನೆಯ ಭಾಗವೂ ಭೂಮಿಗೆ ಬಿದ್ದು ಬರಿಗೈಯಾದ ಬಳಿಕ ಮಾತ್ರ ಆತನಿಗೆ ಸ್ವಲ್ಪ ಎಚ್ಚರೊಡೆಯಿತು. ಆದರೆ ಸತಿಯ ದೇಹವು ಏನಾಯಿತೆಂಬುದು ಆತನಿಗೆ ತಿಳಿಯಲಿಲ್ಲ. ಆತನು ಆ ವಿಚಾರದಲ್ಲಿ ತೊಡಗಲೂ ಇಲ್ಲ. ಮಹಾವಿಷ್ಣುವು ತನ್ನ ಕರ್ತವ್ಯವನ್ನು ಮುಗಿಸಿ ತಿರುಗಿ ನಡೆದನು. ಇಷ್ಟು ಹೊತ್ತಿನವರೆಗೆ ಸತಿಯ ಶರೀರವನ್ನು ಎತ್ತಿಕೊಂಡು ಅಲೆಯುತ್ತಿದ್ದ ಶಂಕರನ ಮನಸ್ಸಿನಲ್ಲಿ ಯಾವ ವಿಚಾರತರಂಗಗಳು ಉಂಟಾಗುತ್ತಿದ್ದುವೋ ನಾವು ಹೇಳಲಾರೆವು. ಸತಿಯ ಶರೀರವನ್ನು ಕಳೆದುಕೊಂಡ ಶಂಕರನು ಏನೋ ಬಂದು ವಿಚಾರ ಬಂದಂತಾಗಿ ವಿಸ್ತಾರವಾದೊಂದು ಬಂಡೆಗಲ್ಲಿನ ಮೇಲೆ ಕುಳಿತನು. ಅಷ್ಟರಲ್ಲಿ ಒಮ್ಮಿಂದೊಮ್ಮೆ ಆಕಾಶದಲ್ಲಿ ಮೋಡಗವಿದು ಮಳೆಗೆ ಆರಂಭವಾಯಿತು. ಶಂಕರನ ಜಟೆಯಲ್ಲಿ ಒಪ್ಪುವ ಗಂಗಾದೇವಿ ಆಕಾಶಕ್ಕೆ ಚಿಮ್ಮಿ ತಿರುಗಿ ಆತನ ಮೈಮೇಲೆ ಸುರಿಯುವಳೋ ಎನ್ನುವಂತೆ “ಧೋ! ಧೋ! ಧೋ!” ಎಂದು ಒಂದೇ ಸವನೆ ಮಳೆ ಸುರಿಯಿತು. ಉನ್ಮತ್ತನಾದ ಶಂಕರನು ಬಂಡೆಗಲ್ಲಿನ ಮೇಲೆ ಸುಮ್ಮನೆ ಕುಳಿತಿದ್ದನು. ಬಹಳ ಹೊತ್ತಿನ ತರುವಾಯ ಮಳೆಯು ಸ್ವಲ್ಪ ಕಡಿಮೆಯಾಯಿತು. ಸಂಗಡಲೇ ಶಂಕರನು ಎಚ್ಚತ್ತು ನಾಲ್ಕು ಕಡೆಗೂ ನೋಡತೊಡಗಿದನು. ಕ್ಷುಬ್ಧವಾದ ಮನಸ್ಸು ಅಲ್ಪ ಶಾಂತವಾಗಲು ಅಲ್ಲಿ ಅನೇಕ ವಿಚಾರಗಳು ಹುಟ್ಟಿದುವು. ಸತಿಯ ಅವಿಚಲವಾದ ಪ್ರೇಮವು ಆತನ ಕಣ್ಣು ಮುಂದೆ ಕಟ್ಟಿತು. ಜಗತ್ಪಿತನಾದ ಶಂಕರನು ಸತಿಯ ವಿಯೋಗವನ್ನು ಸ್ಮರಿಸಿ “ಗಳಗಳನೆ” ಅಳತೊಡಗಿದನು.

ಪ್ರೇಮದ ಮಹಿಮೆಯೇ ಅಂತಹದು. ಸತಿಯ ಪ್ರೇಮಪಾಶದಿಂ ಬದ್ಧನಾಗಿದ್ದ ಶಂಕರನು ಈ ರೀತಿ ವಿಚಾರಮಾಡತೊಡಗಿದನು:—“ಈ ವಿಶ

ಲವಾದ ಜಗತ್ತು ಅಮರವಾಗಿದೆ. ಇದರೊಳಗಿನ ಯಾವ ಪ್ರಾಣಿಯೂ ಸಾಯುವುದೇ ಇಲ್ಲ. ಪಶುಪಕ್ಷಿ ಕ್ರಿಮಿಕೀಟಕಗಳೂ ಮನುಷ್ಯರೂ ನಿಜವಾಗಿ ಅಮರರು. ಅವರು ಈ ವಿಶಾಲವಾದ ಕರ್ಮಭೂಮಿಯಲ್ಲಿ ತಮ್ಮ ತಮ್ಮ ಕರ್ಮಾನುಸಾರವಾಗಿ ರೂಪಾಂತರವನ್ನು ಹೊಂದುತ್ತ ಎಂದರೆ ಭಿನ್ನ ಭಿನ್ನ ಶರೀರಗಳನ್ನು ಧರಿಸುತ್ತ ಸಂಚರಿಸುತ್ತಿರುವರು. ಮನುಷ್ಯನು ಹಳೆಯದಾದ ಬಟ್ಟೆಯನ್ನು ಬಿಟ್ಟು ಹೊಸದನ್ನು ತೊಡುವಂತೆ ಆತ್ಮವು ಜೀರ್ಣವಾದ ಶರೀರವನ್ನು ಬಿಟ್ಟು ಹೊಸದನ್ನು ಸೇರುವುದು. ಒಬ್ಬನೇ ಒಬ್ಬನಾದ, ಅನಂತನೂ ಅಖಂಡನೂ ಅದ್ವಿತೀಯನೂ ಆದ ಪರಮಾತ್ಮನು ಈ ಬ್ರಹ್ಮಾಂಡದಲ್ಲಿ ನಾನಾ ರೂಪಗಳನ್ನು ಧರಿಸಿ ಕ್ರೀಡಿಸುವನು. ಕ್ರಿಮಿಕೀಟಕಗಳಿಂದ ದೇವೇಂದ್ರನ ವರೆಗಿನವರೆಲ್ಲ ಆ ಅಖಂಡವಾದ ಮಹಾಶಕ್ತಿಯ ಅಂಶಗಳು. ಪರಮಾತ್ಮನಿಗೆ ನಾಶವಿಲ್ಲ. ಆದುದರಿಂದ ಆತನ ಅಂಶಗಳಿಗೂ ನಾಶವಿಲ್ಲ. ಹೀಗಿರುವಾಗ ನನ್ನ ಪ್ರಿಯತಮೆ ಸತಿಯು ಸಾಯುವಳೆಂದರೇನು ? ''

" ಪ್ರೇಮವು ಈ ವಿಶಾಲವಾದ ಸೃಷ್ಟಿಯ ಉತ್ಪತ್ತಿಯ ಮೂಲ ಕಾರಣವು. ಪ್ರೇಮವೇ ಜಗತ್ತಿನಲ್ಲಿ ಬಂಧನಕ್ಕೆ ಕಾರಣವು. ಜಗತ್ಕರ್ತನಾದ ಪರಮಾತ್ಮನು ಪ್ರೇಮಮಯನು. ಪ್ರೇಮದ ಬಂಧನದಿಂದಲೇ, ಪ್ರೇಮದ ಆಕರ್ಷಣದಿಂದಲೇ, ಈ ಜಗತ್ತು ಒಂದೇ ಸವನೆ ತಿರುಗುತ್ತಿದೆ. ಸೃಷ್ಟಿಯಲ್ಲಿಯ ಎಲ್ಲ ಕಾರ್ಯಗಳಿಗೂ ಪ್ರೇಮವೇ ಕಾರಣವು. ಪರಮಾಣು, ಅಣು, ಪದಾರ್ಥ, ಸೃಷ್ಟಿ ಇವೆಲ್ಲ ಒಂದು ವಿಧದ ಪ್ರೇಮದಿಂದಲೇ ಒಂದಕ್ಕೊಂದು ಹೊಂದಿಕೆಯಾಗಿ ಈ ಸೃಷ್ಟಿಯ ಕ್ರಮವು ನಡೆದಿದೆ. ಪ್ರೇಮರಹಿತವಾದರೆ, ಪರಮಾಣುಗಳಿಂದ ಅಣುವಾಗದು, ಅಣುಗಳಿಂದ ಪದಾರ್ಥವಾಗದು; ಪದಾರ್ಥಗಳಿಂದ ಸೃಷ್ಟಿಯಾಗದು. ಪ್ರೇಮದ ಮೂಲಕವಾಗಿಯೇ ಪತಿಪತ್ನಿ, ತಂದೆತಾಯಿ, ಬಂಧುಬಳಗ, ಅಕ್ಕತಂಗಿ, ಇವೆಲ್ಲ ಸಂಬಂಧಗಳುಂಟಾಗಿ ಸೃಷ್ಟಿಯ ಕ್ರಮವು ನಡೆದಿದೆ. ಎಂದಬಳಿಕ ನನ್ನ ಪ್ರೇಮಕ್ಕೆ ಆಧಾರವಾದ ಸತಿಯನ್ನು ಹೇಗೆ ಮರೆಯಲಿ ? ಪ್ರೇಮಮಯಿಯಾದ ಸತಿಯೂ ಕೂಡ ನನ್ನನ್ನು ಮರೆಯಬಹುದೇನು ? ಯಾವ ಪ್ರೇಮದಿಂದ ನದಿ ಹರಿಯುವುದೋ, ಗಿಡಗಳಿಗೆ ಹೂಕಾಯಿಗಳಾಗುವುವೋ ಪಶುಪಕ್ಷಿಗಳು ತಮ್ಮವರ ಸಾಮೀಪ್ಯವನ್ನು ಬಯಸುವುವೋ, ಜಗತ್ತಿನೊಳಗಿನ ದೇವ ದಾನವ

ಮಾನವರೆಲ್ಲ ತಮ್ಮವರನ್ನು ಹಗಲಿರುಳು ಹಂಬಲಿಸಿ ಹಲುಬುತ್ತಿರುವರೋ
ಆ ಪ್ರೇಮವು ಸತಿಯ ಅಂತರಂಗದಲ್ಲಿ ಇಲ್ಲದೆ ಇದ್ದೀತೇನು ? ಯಾವ
ಪ್ರೇಮದಿಂದ ತಾಯಿಯು ಆಗಲೆ ಹಡೆದ ಹೊಲೆಮನೆಯ ಹೇಸಿಗೆ ಬರುವ
ಮಗುವನ್ನು ಎತ್ತಿಕೊಂಡು, ಮೊಲೆಯುಣಿಸಿ, ಮುದ್ದಿಡುವಳೋ ಯಾವ
ಪ್ರೇಮವು ಸಾವಿರಾರು ಯೋಜನದ ದೂರದಲ್ಲಿರುವ ಸ್ತ್ರೀಪುರುಷರನ್ನು
ಹಗ್ಗದಿಂದ ಬಿಗಿದಂತೆ ಮಾಡಿ ಹಗಲಿರುಳು ಹಂಬಲಿಸಿ ಅನ್ನಾಹಾರಗಳನ್ನು
ತೊರೆಯುವಂತೆ ಮಾಡುವುದೋ, ಯಾವ ಪ್ರೇಮವು ಈಗ ನನ್ನ ಹೃದಯ
ವನ್ನು ಕಿತ್ತು ಹೊರಗೆ ಎಳೆಯಲು ಯತ್ನಿಸುವುದೋ ಆ ಪ್ರೇಮವು ಸತಿಯ
ಅಂತರಂಗವನ್ನೂ ನನ್ನ ಕಡೆಗೆ ಎಳೆಯುತ್ತಿರಬಹುದಲ್ಲವೇ ?"

ಈ ರೀತಿ ವಿಚಾರ ಮಾಡುತ್ತಿದ್ದ ಶಂಕರನ ಅಂತರಂಗವು ಪುನಃ ಕಳ
ವಳಗೊಂಡಿತು. ಆತನು ತನ್ನ ಪ್ರೇಮದ ಸತಿಯನ್ನು ಯೋಗಸಾಧನೆ
ಯಿಂದ ತಿರುಗಿ ಪಡೆಯುವುದಕ್ಕಾಗಿ ನಿರ್ಜನವಾದ ಅರಣ್ಯವನ್ನು ಸೇರಿ ತಪ
ಸ್ಸನ್ನು ಮಾಡಬೇಕೆಂದು ನಿರ್ಣಯಿಸಿದನು. ಕೂಡಲೆ ಆ ಬಂಡೆಗಲ್ಲಿನ ಮೇಲೆ
ಎದ್ದು ನಿಂತು ಒಮ್ಮೆ ಸುತ್ತಲೂ ನೋಡಿ ಕೊನೆಗೆ ಹಿಮಾಲಯವು ಇದಕ್ಕೆ
ಅತ್ಯುತ್ತಮವಾದ ಸ್ಥಾನವೆಂದು ನಿರ್ಣಯಿಸಿ ಆ ಕಡೆಗೆ ಹೊರಟನು.

ಲೋಕವಿಖ್ಯಾತವಾದ ಹಿಮಾಲಯದ ಸೃಷ್ಟಿಸೌಂದರ್ಯವನ್ನು
ನೋಡಿದ ಕೂಡಲೆ ಆನಂದ, ಆಶ್ಚರ್ಯ, ವಿಸ್ಮಯಗಳಿಂದ ಮನುಷ್ಯನ
ಮನಸ್ಸು ಮಂಕಾಗುವುದು. ಪ್ರಪಂಚದ ಸಕಲಸುಖದುಃಖಗಳೂ
ಮರೆತುಹೋಗುವುವು. ಜನಸಮುದಾಯದಲ್ಲಿ ವಾಸಿಸುವಾಗ ಅವರ ಬಗೆ
ಬಗೆಯ ನಡತೆಯಿಂದಲೂ ಅವರ ಸಹವಾಸದಿಂದಲೂ ಮನಸ್ಸಿನಲ್ಲಿ ನಾನಾ
ವಿಕಾರಗಳು ಉದ್ಭವಿಸುವುವು. ಆದುದರಿಂದಲೇ ತಪಸ್ಸನ್ನಾಚರಿಸಲು ನಿರ್ಜ
ನವಾದ ಅರಣ್ಯವು ಯೋಗ್ಯಸ್ಥಳವೆಂದು ಪೂರ್ವದ ಋಷಿಗಳು ನಿರ್ಣಯಿಸಿ
ದರು. ಹಿಮಾಲಯದಂತಹ ಸೃಷ್ಟಿಕರ್ತನ ಅಗಾಧ ಮಹಿಮೆಯನ್ನು
ತೋರಿಸುವ ಪ್ರಾಕೃತಿಕ ಸೌಂದರ್ಯದ ಆಗರದಲ್ಲಿ ಸಂಚರಿಸುವುದರಿಂದಲೂ
ಅಂತಹ ಸ್ಥಳದಲ್ಲಿ ಕುಳಿತು ತಪಸ್ಸನ್ನು ಮಾಡುವುದರಿಂದಲೂ ಮನಸ್ಸಿನ
ಏಕಾಗ್ರತೆಗೂ ಇಚ್ಛಾಶಕ್ತಿಯ ಬೆಳವಣಿಗೆಯಾಗಿ ಈಶ್ವರ ಸಾಕ್ಷಾತ್ಕಾರ
ವನ್ನು ಪಡೆಯುವುದಕ್ಕೂ ತುಂಬ ಸಹಾಯವಾಗುವುದು. ಜಗಚ್ಚಾಲಕ

ನಾದ ಶ್ರೀಶಂಕರನು ಮೂಢರಾದ ಮಾನವರಿಗೆ ವಿಪತ್ಕಾಲದಲ್ಲಿ ಈಶ್ವರ ಧ್ಯಾನದಲ್ಲಿ ಮನಸ್ಸನ್ನು ತೊಡಗಿಸುವುದು ತಕ್ಕ ಉಪಾಯವೆಂಬುದನ್ನು ತೋರಿಸುವನೋ ಎಂಬಂತೆ ಅತುಲವಾದ ಪ್ರಾಕೃತಿಕ ಸೌಂದರ್ಯದಿಂದ ಮೆರೆಯುವ ಹಿಮಾಲಯದ ಒಂದು ಶಿಖರವನ್ನು ಏರಿ ವಿಶಾಲವಾದ ಒಂದು ಬಂಡೆಗಲ್ಲಿನ ಮೇಲೆ ಕುಳಿತು ತಪಸ್ಸನ್ನು ಆರಂಭಿಸಿದನು. ಮುಂಗಡೆಯಲ್ಲಿ ಹಸುರು ಬಣ್ಣದಿಂದ ಒಪ್ಪುತ್ತಿರುವ ವಿಶಾಲವಾದ ಅಡವಿಯು ಶೋಭಿಸುತ್ತಿದ್ದಿತು. ನಂದಿಯೂ ಇತರ ಗಣಗಳೂ ಶಂಕರನು ಕುಳಿತಿರುವ ಸ್ಥಳದ ಸುತ್ತಲೂ ಸ್ವಲ್ಪ ಭಾಗವನ್ನು ಗಿಡಗಂಟಿಗಳನ್ನು ಕಿತ್ತುತೆಗೆದು ಬಯಲು ಮಾಡಿದರು. ಹಿಂಭಾಗದಲ್ಲಿ ಬಹು ಆಳವಾದ ಕೊಳ್ಳವು ಬಿಳಿಯ ಮಂಜಿನಿಂದ ಮುಚ್ಚಿಕೊಂಡು ಶೋಭಿಸುತ್ತಿದ್ದಿತು. ದೂರದಲ್ಲಿ ಅನೇಕಾನೇಕ ಪರ್ವತ ಶೃಂಗಗಳ ಸಾಲುಗಳು ಒಂದರಹಿಂದೊಂದು ಒಂದರಿಂದೊಂದು ಎತ್ತರವಾಗಿಯೂ ಮನೋಹರವಾಗಿಯೂ ಒಪ್ಪುತ್ತಿದ್ದುವು. ಸ್ಫಟಿಕದಂತೆ ಸ್ವಚ್ಛವಾದ ಬಂಡೆಗಲ್ಲಿನ ಮೇಲೆ ಪರಮ ತೇಜಃಶಾಲಿಯಾದ ಶ್ರೀಶಂಕರನ ಮೂರುತಿಯು ಪರಮಾನಂದಮಯವಾಗಿ ಮೆರೆಯುತ್ತಿದ್ದಿತು.

ಸೃಷ್ಟಿಸ್ಥಿತಿಲಯ ಕರ್ತರಾದ ತ್ರಿಮೂರ್ತಿಗಳಲ್ಲಿ ಒಬ್ಬನಾದ ಶ್ರೀಶಂಕರನು ಈ ರೀತಿ ಸತಿಯ ಪ್ರೀತಿಯನ್ನು ಮರೆಯಲಾರದೆ ಆಕೆಯನ್ನು ಮರಳಿ ಪಡೆಯುವೆನೆಂಬ ಭಾವನೆಯಿಂದ ಹಿಮಾಲಯವನ್ನು ಸೇರಿ ಯೋಗಾರೂಢನಾಗಿ ಕುಳಿತುಕೊಳ್ಳಲು ದೇವತೆಗಳು ಮತ್ತೆ ಚಿಂತೆಗೊಳಗಾದರು. ಜಗದೊಡೆಯನಾದ ಪರಮಾತ್ಮನ ಸತ್ತ್ವರಜಸ್ತಮಗಳೆಂಬ ಮೂರು ಗುಣಗಳಿಗೆ ಆಶ್ರಯವೆನಿಸಿದ ಬ್ರಹ್ಮ ವಿಷ್ಣು ಮಹೇಶ್ವರರು ಪರಸ್ಪರರನ್ನು ಅವಲಂಬಿಸಿದವರು. ಈ ಮೂವರ ಸಂಯೋಗದಿಂದಲೇ ಮೂಲಶಕ್ತಿಯು ಉತ್ಪತ್ತಿ. ಈ ಮೂರು ಗುಣಗಳಲ್ಲಿ ಒಂದು ಇಲ್ಲದಂತಾದರೆ ಉಳಿದವೆರಡೂ ಶಕ್ತಿಹೀನವಾಗುವುವು. ಆದುದರಿಂದಲೇ ಶಿವನು ತನ್ನ ಕರ್ತವ್ಯವನ್ನು ಬಿಟ್ಟುಬಿಡಲು ಬ್ರಹ್ಮ ವಿಷ್ಣುಗಳೂ ಶಕ್ತಿಹೀನರಾದರು. ಜಗತ್ತಿನ ಕ್ರಮಕ್ಕೆ ಭಂಗವುಂಟಾಯಿತು. ಆದುದರಿಂದ ಸಕಲದೇವತೆಗಳೂ ಒಂದಾಗಿ ಜಗದಂಬೆಯಾದ ಆದಿಮಾಯೆಯನ್ನು ಧ್ಯಾನಿಸತೊಡಗಿದರು.

---

## ಎರಡನೆಯ ಪರಿಚ್ಛೇದ.



# ಪುನರ್ಜನ್ಮ





ಪುಣ್ಯಭೂಮಿ ಭರತಖಂಡಕ್ಕೂ ಉತ್ತರದ ಯವನ
ರಾಜ್ಯಗಳಿಗೂ ನಡುವೆ ಅಭೇದ್ಯವಾದ ದುರ್ಗವನ್ನು
ರಚಿಸಬೇಕೆಂಬ ಉದ್ದೇಶದಿಂದಲೋ ಭರತಖಂಡ
ಸತ್ವಶಾಲಿಗಳಾದ ಪ್ರಜೆಗಳೂ ಅವರ ಸಿರಿಯೂ
ಸಂಪತ್ತೂ ಹೊರಗೆ ಹೋಗಲಾಗದೆಂಬ ಭಾವನೆಯಿ
ದಲೋ ಅದ್ವಿತೀಯರಾದ ಹಿಂದೂ ಮಹಾಪುರುಷ
ವಿಚಾರ ಮಾರ್ಗಗಳು ಅನ್ಯ ಸಂಸ್ಕೃತಿಗಳ ಸಂಸರ್ಗದಿಂದ ಮಲಿನವಾ
ಕೂಡದೆಂಬ ಬಯಕೆಯಿಂದಲೋ ಇನ್ನಾವ ವಿಚಾರದಿಂದಲೋ ಪರಮ
ಕರುಣಾಳುವಾದ ಸೃಷ್ಟಿಕರ್ತನು ಇದರ ಉತ್ತರದ ಮೇರೆಗೆ ದುರ್ಗಮವಾ
ಪರ್ವತಾವಳಿಗಳನ್ನು ಸೃಷ್ಟಿಸಿದನು. ಆ ಪರ್ವತಾವಳಿಗಳಲ್ಲಿ ನಡುನಡು
ಅನೇಕ ಮಹಾನದನದಿಗಳನ್ನೂ ಅಗಮ್ಯವಾದ, ಕೊನೆಗೆ ಅಮಿತವಾ
ಹಿಮರಾಶಿಗಳನ್ನೂ ಅರಣ್ಯಗಳನ್ನೂ ಹುಟ್ಟಿಸಿ ಅದನ್ನು ಮತ್ತಿಷ್ಟು ಭದ್ರಪ
ಸಿದನು. ಸೃಷ್ಟಿಕರ್ತನ ಕಾರ್ಯಗಳು ಯಾವಾಗಲೂ ಅನೇಕ ರೀತಿಯಿಂ
ಲೋಕೋಪಕಾರಿಗಳಾಗಿರುವುವೆಂಬುದು ಸಿದ್ಧಾಂತವಾದ ಮಾತು. ಈ ಸಿ
ಮಾನುಸಾರವಾಗಿ ಹಿಮಾಲಯದಿಂದ ಭರತಖಂಡಕ್ಕೆ ಇನ್ನೊಂದು ರೀ
ಯಿಂದ ಶ್ರೇಷ್ಠತ್ವವುಂಟಾಗಿರುವುದು. ಸೃಷ್ಟಿಯಲ್ಲಿಯ ಆನಂದಕರವಾ
ಪ್ರಾಕೃತಿಕ ಸೌಂದರ್ಯಗಳನ್ನು ನೋಡುವುದಾದರೆ ಮೊದಲು ಹಿಮಾ
ಯಕ್ಕೆ ಹೋಗಬೇಕು. ಇಂತು ಅನೇಕ ವಿಧದಿಂದ ಭರತಭೂಮಿಯ ಅ
ಮಾನಕ್ಕೆ ಕಾರಣವಾದ ಹಿಮಾಲಯದಲ್ಲಿ ಪೂರ್ವಕಾಲದಲ್ಲಿ **ಹಿಮವ**
ನೆಂಬ ಬಹು ಪ್ರತಾಪಶಾಲಿಯಾದ ಅರಸನು ರಾಜ್ಯವಾಳುತ್ತಿದ್ದನ

**ಓಷಧಿಪ್ರಸ್ಥ**ವೆಂಬ ನಗರವು ಆತನ ರಾಜಧಾನಿ. ಪರಮ ಪತಿವ್ರತೆಯಾದ **ಮೇನಾದೇವಿ**ಯು ಹಿಮವಂತನಿಗೆ ಅನುರೂಪಳಾದ ಅರಸಿಯಾಗಿದ್ದಳು. ಸದಾಚಾರಿಗಳೂ ಸದ್ಗುಣಿಗಳೂ ಸುಕೃತಶಾಲಿಗಳೂ ಆದ ಆ ರಾಜದಂಪತಿಗಳು ಬಹುಕಾಲ ಸುಖದಿಂದ ಬಾಳುವೆ ಮಾಡುತ್ತಿರಲು ಅವರಿಗೆ **ಮೈನಾಕ**ನೆಂಬ ಮಗನು ಹುಟ್ಟಿದನು. ಮೈನಾಕನು ಕೂಡ ತಂದೆತಾಯಿಗಳಂತೆಯೇ ಸದ್ಗುಣಿಯೂ ಸದಾಚಾರಿಯೂ ಆಗಿ ಸಕಲ ಜನಾನಂದಕರನಾಗಿದ್ದನು.

ಸೃಷ್ಟಿಯಲ್ಲಿ ಅನಂತವೆನಿಸುವ ಮಹಾಸಾಗರಗಳಿಗೂ ಮೇರೆಯುಂಟು. ಆದರೆ ಮನುಷ್ಯನ ಮನಸ್ಸಿನ ಆಶೆಗೆ ಮಾತ್ರ ಯಾರೂ ಮೇರೆಯನ್ನು ಕಲ್ಪಿಸಿಲ್ಲ. ಮನುಷ್ಯನು ಒಮ್ಮೆ ಆಸೆಯೆಂಬ ಪಾಶದೊಳಗೆ ತೊಡಕಿಕೊಂಡನೆಂದರೆ ಅವನು ಕೊನೆಮುಟ್ಟಿದ್ದನ್ನು ಕಂಡವರಿಲ್ಲ. ಸಕಲ ಸಮೃದ್ಧಿಗಳಿಂದ ಒಪ್ಪುತ್ತಿರುವ ರಾಜಧಾನಿಯಲ್ಲಿ ಸಕಲ ಇಷ್ಟಾರ್ಥಗಳನ್ನೂ ಕ್ಷಣಾರ್ಧದಲ್ಲಿ ಪೂರೈಸಿಕೊಡಲು ಸಮರ್ಥನಾದ ಪತಿಯಿಂದೊಡಗೂಡಿ ಸಕಲ ಜನಾನಂದಕರನಾದ ಪುತ್ರನೊಡನೆ ಬಾಳುವೆ ಮಾಡುವ ಮೇನಾದೇವಿಯ ಮನಸ್ಸಿನ ಆಶೆಯೆಂಬ ಬಳ್ಳಿಗೆ ಇರ ಇರುತ್ತ ಹೊಸದೊಂದು ಚಿಗುರೊಡೆಯಿತು. ಅಚಲವಾದ ಪತಿವ್ರತಾ ಧರ್ಮದ ಬಲದಿಂದಲೂ ಅಪರಿಮಿತವಾದ ಶ್ರದ್ಧಾಭಕ್ತಿಗಳಿಂದ ಕೂಡಿದ ಅಮೋಘವಾದ ತಪಸ್ಸಿನ ಬಲದಿಂದಲೂ, ಆದಿಮಾಯೆಯಾಗಿ ಸಕಲ ಸೃಷ್ಟಿ ಸ್ಥಿತಿ ಲಯಗಳ ಕರ್ತ್ರೀಯಾದ ಜಗದಂಬೆಯು ತನ್ನ ಬಸಿರಿನಲ್ಲಿ ಬರುವಂತೆ ಮಾಡುವೆನೆಂದು ಮೇನಾದೇವಿಯು ನಿಶ್ಚಯಿಸಿದಳು; ಮಹಾ ತಪಸ್ಸನ್ನು ಆರಂಭಿಸಿದಳು.

ಅತ್ತ ದೇವಾಧಿದೇವನಾದ ಶ್ರೀಶಂಕರನು ನಿಜನಿವಾಸ ಹಿಮಾಲಯದಲ್ಲಿ ಉಗ್ರವಾದ ತಪಸ್ಸನ್ನು ಆರಂಭಿಸಿರಲು ದೇವಲೋಕದಲ್ಲಿ ದೇವತೆಗಳೆಲ್ಲರೂ ಬಹು ಚಿಂತೆಗೊಳಗಾದರು. ಇಂತಿರುವಾಗ ಒಂದು ದಿನ ಇಂದ್ರಾದಿ ಸಕಲ ದೇವತೆಗಳಿಂದ ವಿರಾಜಮಾನವಾದ ದೇವಸಭೆಯನ್ನು ದೇವರ್ಷಿ ನಾರದರು ಅಕಸ್ಮಾತ್ತಾಗಿ ಪ್ರವೇಶಿಸಿದರು. ಪ್ರಸಂಗೋಚಿತವಾದ ಆದರೋಪಚಾರಗಳೆಲ್ಲ ಯಥಾ ರೀತಿ ನಡೆದ ಬಳಿಕ ಸಭಾಪತಿ ಇಂದ್ರನು ನಾರದರನ್ನು ಕುರಿತು ಶ್ರೀಶಂಕರನ ತಪಶ್ಚರ್ಯೆಯನ್ನೂ ಅದರಿಂದ ಲೋಕದಲ್ಲುಂಟಾಗಬಹುದಾದ ಅನರ್ಥ ಪರಂಪರೆಗಳನ್ನೂ ಬಹು ಚಿಂತೆಯಿಂದ ಬಿನ್ನವಿಸಿ ಮುಂ

ದೇನು ಗತಿಯೆಂದು ಉಸಿರ್ಗರೆದನು; ಮತ್ತು ಶ್ರೀಶಂಕರನು ಇಷ್ಟೇ ವಿಷಯಾಂಧನಂತೆ ಸತಿಯನ್ನು ನೆನೆಯುತ್ತಿರುವನೆಂದೂ ಕರ್ತವ್ಯಚ್ಯುತನಾಗಿರುವನೆಂದೂ ಕೇಳಿದನು. ಇದನ್ನು ಕೇಳಿ ನಾರದರಿಗೆ ನಗೆಬಂದಿತು. ಇಂದ್ರಾದಿ ದೇವತೆಗಳೆಲ್ಲರೂ ನಾರದರ ನಗೆಯನ್ನು ನೋಡಿ ಬೆರಗಾದರು. ತಾವೆಲ್ಲರೂ ಬಹುದಿನಗಳಿಂದ ಮನಸ್ಸಿನಲ್ಲಿ ಚಿಂತಿಸಿ ಚಿಂತಿಸಿ ಮುಂದುಗಾಣದ ಬೆಂದು ಬೆಂಡಾಗಿರುವ ಮಹಾಪ್ರಶ್ನೆಯನ್ನು ಕೇಳಿ ನಾರದರು ಅದೇನೋ ಒಂದು ಕ್ಷುಲ್ಲಕವಿಚಾರವೆಂಬ ಭಾವನೆಯನ್ನು ತೋರ್ಪಡಿಸಿ ನಕ್ಕುಬಿಟ್ಟ ದನ್ನು ನೋಡಿ ದೇವತೆಗಳು ‘ ಈ ಮುದಿನಾರದನು ಯಾವಾಗಲೂ ಇಂತಹ ವಿಚಿತ್ರಸ್ವಭಾವದವನು’ ಎಂದು ಮನಸ್ಸಿನಲ್ಲಿ ಅನಾದರವನ್ನು ತಳೆದರೂ ಅಂತರಂಗದ ಕುತೂಹಲವು ಅವರನ್ನು ಸುಮ್ಮನಿರಗೊಡಲಿಲ್ಲ. ನಾರದರ ವಿಚಾರವನ್ನು ತಿಳಿದುಕೊಳ್ಳಲು ಅವರೆಲ್ಲರೂ ಉತ್ಸುಕರಾಗಿ ಪ್ರಶ್ನೆಮಾಡಿದರು.

**ಇಂದ್ರ:**—ಸತಿಯ ವಿಯೋಗದಿಂದ ಶ್ರೀಶಂಕರನಿಗೆ ಅಷ್ಟೊಂದು ದುಃಖವಾಗಲು ಕಾರಣವೇನು?

**ನಾರದ:**—ಪ್ರಪಂಚದ ಮಹಿಮೆ ಬಹು ವಿಚಿತ್ರವಾದುದು. ಅದರಲ್ಲಿ ಇದೆಯೆಂದರೆ ಎಲ್ಲವೂ ಉಂಟು; ಇಲ್ಲವೆಂದರೆ ಏನೂ ಇಲ್ಲ. ಆದರೆ ಒಮ್ಮೆ ಇದೆಯೆಂದು ಭಾವಿಸಿಕೊಂಡ ಬಳಿಕ ಮಾತ್ರ ಇಲ್ಲವೆನ್ನುವುದು ದುಸ್ಸಾಧ್ಯವು ಬಹು ಕಷ್ಟಸಾಧ್ಯವು. ನಿರ್ವಿಕಾರಚಿತ್ತನಾದ ಶಂಕರನನ್ನು ಹಿಂದೊಂದು ದಿನ ನಾನೇ ಪ್ರಪಂಚದ ಪಾಶದಲ್ಲಿ ತೊಡಕಿಸಿದೆನು. ಆತನಿಗೆ ಸತಿಯ ಸಂಗ ಮದುವೆಯನ್ನು ಹೂಡುವ ಕಾರ್ಯವನ್ನು ನಾನೇ ಒಪ್ಪಿಕೊಂಡಿದ್ದೆನು ಆದರೆ ಅದರ ಪರಿಣಾಮವು ಈ ರೀತಿ ಬಹು ತೊಡಕಾಗುವುದೆಂದು ಮಾತ್ರ ನಾನು ಭಾವಿಸಿರಲಿಲ್ಲ. ಪ್ರಪಂಚದಲ್ಲಿ ಒಬ್ಬೊಬ್ಬನಿಗೂ ಸಂಗಡಿಗರು ಬೇಕೆ ಬೇಕು. ಸಂಗಡಿಗರೆಂದರೆ ನಿಜವಾದ ಹಿತಚಿಂತಕರೆಂದು ಭಾವವು. ಬಾಲ ದಲ್ಲಿ ತಂದೆತಾಯಿಗಳೂ, ತಾರುಣ್ಯದಲ್ಲಿ ಸತಿಗೆ ಪತಿಯೂ ಪತಿಗೆ ಸತಿಯೂ ವಾರ್ಧಕ್ಯದಲ್ಲಿ ಮಕ್ಕಳೂ ಮುಖ್ಯರಾದ ಸಂಗಡಿಗರು. ತಂದೆತಾಯಿಗಳಿ ತಾವೇ ತಮ್ಮ ಮಕ್ಕಳೆಂಬ ಭಾವನೆಯಿರುವುದು. ಆದುದರಿಂದ ಮಕ್ಕಳಿ ತಂದೆತಾಯಿಗಳೂ ತಂದೆತಾಯಿಗಳಿಗೆ ಮಕ್ಕಳೂ ಸಂಗಡಿಗರು. ಸತಿಪ ಗಳಲ್ಲಿ ಅಭಿನ್ನಭಾವವಿರುವುದರಿಂದ ಅವರು ಪರಸ್ಪರವಾಗಿ ಸಂಗಡಿಗರು.

ತೆರವ ಸಂಗಡಿಗರಿಲ್ಲದ ಸಂಸಾರವೂ ಶ್ಮಶಾನವೂ ಒಂದೇ ಸರಿ. ತಾನು ತನ್ನದು ಎಂಬ ವಿಚಾರವೂ ಅನ್ಯರು ತಮ್ಮವರು ಎಂಬ ಭಾವನೆಯೂ ಎಂದರೆ ಅಹಂಕಾರ ಮಮಕಾರಗಳು ಈ ಸೃಷ್ಟಿಯಲ್ಲಿ ಸ್ವಭಾವಸಿದ್ಧವಾದ ಮನೋವಿಕಾರಗಳಾಗಿವೆ. ಬಾಲ್ಯದಲ್ಲಿಯ ಮನೋಭಾವನೆಗಳು ಕೋಮಲವಾಗಿರುವುದರಿಂದಲೂ ಮಕ್ಕಳಿಗೆ ತಂದೆತಾಯಿಗಳ ವಿಷಯವಾಗಿರುವ ಮಮತೆಗಿಂತಲೂ ಪ್ರಪಂಚದ ಸ್ವತಂತ್ರ ನಿಯಾಮಕರಾಗಿರುವ ತರುಣ ದಂಪತಿಗಳ ಪ್ರಬುದ್ಧವಾದ ಮನೋಭಾವನೆಗಳ ಮತ್ತು ಆ ಕಾಲದ ಅವರ ಪ್ರಾಪಂಚಿಕ ಬೇಡಿಕೆಗಳ ಪ್ರಾಬಲ್ಯದಿಂದ ಹುಟ್ಟುವ ಮಮತೆಯು ಬಹುಮಟ್ಟಿಗೆ ಪ್ರಬಲವಾಗಿರುವುದು; ದೃಢತರವಾಗಿರುವುದು; ಬಹು ಪರಿಣಾಮಕರವಾಗಿರುವುದು; ತುಂಬ ಸುಂದರವಾಗಿರುವುದು! ಅನುರೂಪರಾದ ದಂಪತಿಗಳು ಪ್ರಪಂಚದ ಪ್ರಥಮ ಪ್ರವಾಹದಲ್ಲಿ ಸೇರಿ ಇಂತಹ ಪ್ರಬಲವೂ ದೃಢತರವೂ ಪರಿಣಾಮಕರವೂ ಸುಂದರವೂ ಆದ ಪ್ರೇಮಬಂಧನದಿಂದ ಅನ್ಯೋನ್ಯ ಸಹಾಯಕಾರಿಗಳಾಗಿ ಸಂಸಾರಲೀಲೆಯನ್ನು ಆರಂಭಿಸಿರುವಾಗ ಅಕಸ್ಮಾತ್ತಾಗಿ ಅವರ ಆಧಾರಬಂಧನವು ಹರಿದುಹೋಯಿತೆಂದರೆ ಅವರು ಪ್ರಪಂಚವೆಂಬ ಪ್ರವಾಹದ ಸೆಳವಿನಿಂದ ಪಾರಾಗಿ ದಡವನ್ನು ಮುಟ್ಟುವುದು ಎಂದೂ ಆಗದ ಮಾತು. ಆಮರಣ ವಿರಹಿಗಳಾದ ಅವರಿಗೆ ಸಂಸಾರವು ಶೂನ್ಯವೆನಿಸುವುದು. ಕರ್ತವ್ಯಾಕರ್ತವ್ಯಗಳ ಜ್ಞಾನವಿರದು. ಮನೆಯು ಮಸಣವೆನಿಸುವುದು. ಅಮೃತವು ವಿಷವೆನಿಸುವುದು. ಬಂಧುಗಳು ಹಗೆಗಳೆನಿಸುವರು. ಕೇವಲ, ಶುದ್ಧವಾದ ವಿರಕ್ತಿ ಹುಟ್ಟುವುದು. ತಾರುಣ್ಯದಲ್ಲಿ ಅನುರೂಪರಾದ ಪತಿಪತ್ನಿಯರನ್ನು ಪಡೆಯದವರ ಬಾಳುವೆ ಬಾಳುವೆಯಲ್ಲ. ಕೈಲಾಸಪತಿ ಶಂಕರನು ತನಗೆ ಅನುರೂಪಳಾದ ಸತಿಯಿಂದ ಕೂಡಿ ಪ್ರಪಂಚವನ್ನು ಸಾಗಿಸಿರುವಾಗ ದಕ್ಷನ ಅಹಂಕಾರದಿಂದ ಘಟಿಸಿದ ಸತಿಯ ವಿಯೋಗದಿಂದ ಈ ರೀತಿ ವಿರಕ್ತನಾಗಿರುವುದು ನಿಮಗೆ ಕಷ್ಟವಾಗಿರುವ ಕಾರಣ ಮಾತ್ರ ನೀವು ಆತನ ಮೇಲೆ ಅಲ್ಲದಸಲ್ಲದ ಆರೋಪಗಳನ್ನು ಹೊರಿಸುವಿರಿ. ಇದರಲ್ಲಿ ನಿಮ್ಮ ಸ್ವಾರ್ಥಮಯವಾದ ಬುದ್ಧಿಗೆ ಶಂಕರನ ಇಂತಹ ಅಮೋಘವಾದ ಪ್ರೇಮಪಾಶದ ಆಕಸ್ಮಿಕವೂ ಅಯೋಗ್ಯವೂ ಆದ ವಿಚ್ಛೇದನ ತೀರ ಸಾಮಾನ್ಯವಾಗಿ ತೋರಿದರೂ ಆತನಿಗೆ ಅದು ಅಷ್ಟು ಸಾಮಾನ್ಯವಾಗಿಲ್ಲ.

ಇಂದ್ರ:—ಕೈಲಾಸಪತಿ ಶಂಕರನೇ ಹೀಗೆ ಪ್ರಾಪಂಚಿಕರಂತೆ ಮನೋ
ವಿಕಾರವಶನಾಗಿ ಸಂಸಾರದ ಸುಖದುಃಖಗಳಿಗಾಗಿ ಕೊರಗುವನೆಂದರೆ
ಈ ಲೋಕದಲ್ಲಿಯ ಸಾಮಾನ್ಯ ದೇವಮಾನವರ ಪಾಡೇನು?

ನಾರದ:—ದೊಡ್ಡ ಹುಣ್ಣಿಗೆ ದೊಡ್ಡ ಬೇನೆಯಾದರೆ ಸಣ್ಣ ಹುಣ್ಣಿಗೆ
ಸಣ್ಣ ಬೇನೆ. ಲೋಕದಲ್ಲಿ ಬೆಲೆಯುಳ್ಳ ವಸ್ತುವಿನ ಪ್ರಾಪ್ತಿಯಿಂದ ಹೆಚ್ಚು
ಆನಂದವಾಗುವಂತೆ ಅದರ ವಿಯೋಗದಿಂದ ಅಷ್ಟೇ ದುಃಖವಾಗುವುದು ಸಹ
ಜವು. ಸತೀ ಶಂಕರರಂತೆ ಅನುರೂಪರಾದ ಸತಿಪತಿಗಳಿದ್ದರೆ ಅವರು ಇಂತ
ಹದೇ ವಿಯೋಗ ದುಃಖಕ್ಕೆ ಗುರಿಯಾಗುವುದು ನಿಃಸಂಶಯವಾದ ಮಾತು
ವೈರಾಗ್ಯ ವಿಚಾರವೂ ಪ್ರಾಪಂಚಿಕರ ಆಸ್ತಿಕಭಾವನೆಯೂ ಒಂದೊಕ್ಕೊಂದು
ಕೂಡುವುದು ಸುಲಭವಲ್ಲ. ಪ್ರಿಯಕರವಾದ ವಸ್ತುಗಳ ಅಭಾವದಿಂದ
ಅಥವಾ ಅವು ಅಸ್ಥಿರವೆಂಬ ಭಾವನೆಯಿಂದ ಮನಸ್ಸಿನಲ್ಲಿ ಆ ವಸ್ತುಗಳ
ವಿಷಯವಾಗಿ ಅನಾದರವನ್ನು ಹುಟ್ಟಿಸಿಕೊಳ್ಳುವುದು ವೈರಾಗ್ಯದ ವಿಚಾರ
ಕ್ರಮವೆಂದು ಕೆಲವರು ಪ್ರತಿಪಾದಿಸುವರು. ಪ್ರಪಂಚದಲ್ಲಿದ್ದವರು ಪರ
ಮಾರ್ಥವನ್ನು ಚಿಂತಿಸುವುದೆಂದರೆ ಹುಟ್ಟು ಕತ್ತಲೆಯಲ್ಲಿದ್ದವನು ಬೆಳಕಿನ
ಭಾವನೆಯನ್ನು ಮಾಡುತ್ತಿರುವಂತಯೇ ಸರಿ. ಪ್ರಪಂಚದ ಪರಿಸ್ಥಿತಿಯೇ
ಬೇರೆ, ಪರಮಾರ್ಥದ ಪರಿಸ್ಥಿತಿಯೇ ಬೇರೆ. ಹೀಗೆಂದರೆ ಪ್ರಪಂಚದಲ್ಲಿದ್ದು
ಪರಮಾರ್ಥವನ್ನು ಸಾಧಿಸಲು ಬಾರದೆಂದು ಮಾತ್ರ ಅರ್ಥವಲ್ಲ. ಬೆಳಕು
ಸುಖಕರವಾಗಿದ್ದರೂ ಆನಂದಕರವಾಗಿದ್ದರೂ ಬಹಳ ಹೊತ್ತು ಕತ್ತಲೆಯಲ್ಲಿ
ದ್ದವರು ಒಮ್ಮೆಲೆ ಬೆಳಕಿಗೆ ಬರಲು ಯತ್ನಿಸಿ ಬಂದರೆ ಕಣ್ಣು ನೋಯುವುದೂ
ಅಲ್ಲಿರುವ ವಸ್ತುಗಳ ಅಸ್ಪಷ್ಟವಾದ ಜ್ಞಾನವಾಗುವುದೂ ತೀರ ಸಹಜವಾದ
ಮಾತು. ಇದೂ ಅಲ್ಲದೆ ಶಂಕರನ ಆಚರಣೆಯಲ್ಲಿ ಇನ್ನೂ ಒಂದು ಗುಟ್ಟು
ಅಡಕವಾಗಿದೆ. ಲೋಕಹಿತಕರ್ತನಾದ ಶಂಕರನು ತನಗೆ ಸತಿಯಲ್ಲಿರುವ
ಅನುರಾಗವನ್ನು ಲೋಕಕ್ಕೆ ತೋರ್ಪಡಿಸಿ ಪ್ರಪಂಚದ ಒಂದು ಆದರ್ಶವನ್ನು
ಸ್ಥಾಪಿಸಲು ಯತ್ನಿಸುವಂತಿದೆ.

ಇಂದ್ರ:— ನಾರದನೇ, ತಿಳಿಯಿತು. ಶಂಕರನು ಸತಿಯ ಅತುಲವಾದ
ಪ್ರೇಮದ ಎಳೆತಕ್ಕೆ ಸಿಕ್ಕು ಕರ್ತವ್ಯವನ್ನು ಮರೆತು ಕುಳಿತಿರುವುದು ಯೋಗ್ಯ
ವಾಗಲಿ, ಅಯೋಗ್ಯವಾಗಲಿ ಅದರ ನಿರ್ಣಯವು ನಮಗೆ ಅಷ್ಟೊಂದು ಮಹ

ತ್ತ್ವದ ಮಾತಲ್ಲ. ನಮ್ಮ ಗತಿಯೇನೆಂಬುದೇ ನಾವು ಮೊದಲು ಆಲೋಚಿಸ ಬೇಕಾದ ಪ್ರಶ್ನೆ. ಇದಕ್ಕೇನು ಉತ್ತರ ಹೇಳುವಿರಿ?

**ನಾರದ:—** ಆ ಉತ್ತರವನ್ನು ನಾನು ಹೇಳಬೇಕಾಗಿಲ್ಲ. ಇದಕ್ಕಾಗಿ ನೀವು ಚಿಂತಿಸಬೇಕಾಗಿಯೂ ಇಲ್ಲ. ಜಗತ್ತಿನಲ್ಲಿ ಆಗತಕ್ಕ ಸಂಗತಿಗಳು ತಾವಾಗಯೇ ಆಗುವುವು. ಸ್ಥಾನಕಾಲಗಳ ಮಹತ್ತ್ವದಿಂದ ಎಲ್ಲ ಕಾರ್ಯಗಳೂ ಕೂಡಿಬರುವುವು. ಶ್ರೀ ಶಂಕರನು ಸತಿಯ ಪ್ರಾಪ್ತಿಗಾಗಿ ತಪಸ್ಸನ್ನು ಆಚರಿಸುತ್ತಿರುವಂತೆ ಆ ಆದಿಮಾಯೆ ತನ್ನ ಬಸಿರಿನಲ್ಲಿ ಜನಿಸಿಬರಬೇಕೆಂದು ಪರ್ವತ ರಾಜನ ಪತ್ನಿ ಮೇನಾದೇವಿ ಉಗ್ರವಾದ ತಪಸ್ಸನ್ನು ಆರಂಭಿಸಿರುವಳು. ಅವರಿಬ್ಬರ ಬಯಕೆಯ ಸಂಗಡ ನಿಮ್ಮೆಲ್ಲರ ಇಚ್ಛೆ ಪೂರ್ಣವಾಗುವುದರಲ್ಲಿ ಸಂಶಯವಿಲ್ಲ. ಜಗಜ್ಜನನಿಯಾದ ಆದಿಶಕ್ತಿಯು ಮೇನಾದೇವಿಯ ಗರ್ಭದಲ್ಲಿ ಅವತರಿಸಿ ಶಂಕರನ ಕೈಹಿಡಿದು ನಿಮ್ಮೆಲ್ಲರ ಅಭೀಷ್ಟಗಳನ್ನು ಸಲಿಸುವಳು.

ಈ ರೀತಿಯಾದ ಆನಂದ ವಾರ್ತೆಯನ್ನು ದೇವಲೋಕದಲ್ಲಿ ಹಬ್ಬಿಸಿದ ಬಳಿಕ ನಾರದರು, ತಮ್ಮ ಇನ್ನಾವುದೋ ಕಾರ್ಯವನ್ನು ಕೊನೆಗಾಣಿಸುವುದಕ್ಕಾಗಿ ದೇವಸಭೆಯಿಂದ ಹೊರಟರು. ದೇವತೆಗಳು ಆನಂದಭರಿತರಾದರು.

ಉಗ್ರವಾದ ತಪಸ್ಸನ್ನಾಚರಿಸುತ್ತಿರುವ ಮೇನಾದೇವಿಯು ತಪೋವನದಲ್ಲಿ ಒಂದು ದಿನ ಆಕಾಶದಲ್ಲಿ ಆಕಸ್ಮಿಕವಾಗಿ ಕತ್ತಲೆಕವಿಯಿತು. ಪರಕ್ಷಣದಲ್ಲಿಯೇ ಅದ್ಭುತವಾದ ದಿವ್ಯತೇಜಸ್ಸು ಪ್ರಕಟವಾಯಿತು. ಇಂತಹ ಅಘಟಿತವಾದ ಘಟನೆಗಳ ಕಾರಣವನ್ನು ಆಲೋಚಿಸುತ್ತಿರುವಷ್ಟರಲ್ಲಿ "ಭಗವತಿಯೇ, ನಿನ್ನ ಅಭೀಷ್ಟವು ಸಾಧಿಸುವುದು, ಇನ್ನು ತಪಸ್ಸನ್ನು ಬಿಡು!" ಎಂಬ ವಾಕ್ಯವು ಮನೋಹರವಾದ ವೀಣಾನಾದದಂತೆ ಮೃದು ಮಧುರವಾಗಿ ಅಸ್ಪಷ್ಟವಾಗಿದ್ದರೂ ಸ್ಪಷ್ಟವಾಗಿ, ಅತಿ ದೂರದಲ್ಲಿದ್ದರೂ ಸಮೀಪವಾಗಿ ಕೇಳಬಂದಿತು. ಇದನ್ನು ಕೇಳಿ ಮೇನಾದೇವಿಯು ಆನಂದಭರಿತಳಾಗಿ ಅತುಲವಾದ ಭಕ್ತಿಭಾವನೆಯಿಂದ ಕಣ್ಣುಗಳನ್ನು ಮುಚ್ಚಿ ಕೈಜೋಡಿಸಿ,

"ಸರ್ವಮಂಗಲ ಮಾಂಗಲ್ಯೇ ಶಿವೇ ಸರ್ವಾರ್ಥ ಸಾಧಿಕೇ॥
ಶರಣ್ಯೇ ತ್ರ್ಯಂಬಕೇ ಗೌರೀ ನಾರಾಯಣಿ ನಮೋಸ್ತು ತೇ॥"

ಎಂದು ಸ್ಪಷ್ಟವಾಗಿದ್ದರೂ ಕೋಮಲವೂ ಭಕ್ತಿರಸಪೂರಿತವೂ ಆದ ಕಲಕಂಠದಿಂದ ಸ್ತುತಿಮಾಡಿದಳು.

ಹೀಗೆ ಆಕಾಶವಾಣಿಯಾದ ಬಳಿಕ ಮೇನಾದೇವಿಯು ತನ್ನ ಮನ
ಬಂದು ಪತಿಯೊಡನೆ ಸಂಸಾರ ಮಾಡತೊಡಗಿದಳು. ಕೆಲವು ದಿನಗಳಲ್ಲಿಯೆ
ದೇವಿಯ ವರವು ಫಲಿಸುವ ಲಕ್ಷಣಗಳು ತೋರಿದುವು. ಮೇನಾದೇವಿಯ
ಗರ್ಭವತಿಯಾದಳು. ಅರಸನೂ ಅರಸಿಯೂ ಪರಿವಾರದವರೂ ಸಕಲ ಪ್ರ
ಗಳೂ ಆನಂದದಿಂದ ಉತ್ಸವಗಳನ್ನು ಮಾಡಿದರು.

ಯಥಾಕಾಲದಲ್ಲಿ ಮೇನಾದೇವಿಯು ಕನ್ಯಾರತ್ನವನ್ನು ಹಡೆದಳ
ಶುಕ್ಲಪಕ್ಷದ ಚಂದ್ರನ ಕಲೆಯಂತೆ ಶಿಶುವು ದಿನದಿನಕ್ಕೆ ಹೆಚ್ಚು ಹೆಚ್ಚಾ
ಬಳೆಯತೊಡಗಿತು. ಜಗಜ್ಜನನಿಯ ಅವತಾರವಾದಂದಿನಿಂದಲೂ ಹಿಮಾಲ
ದಲ್ಲಿ ಆಶ್ಚರ್ಯಕರವಾದ ಪರಿವರ್ತನೆಗಳುಂಟಾದುವು. ಮಾನವರೂ ಪ್ರಾ
ವನಸ್ಪತಿಗಳೂ ಕಾರಣ ಸೂಚನೆಯಿಲ್ಲದೆ ಅತುಲವಾದ ಆನಂದವನ್ನು ಅ
ಭವಿಸತೊಡಗಿದುವು. ಪರ್ವತರಾಜನ ಮನೆಯಲ್ಲಿ ಅವತರಿಸಿದ ಜಗಜ್ಜನನಿ
ಉಜ್ವಲವಾದ ಪ್ರತಿಭೆಗೆ ನಾಚಿಕೊಂಡುದರಿಂದಲೋ ಏನೋ ಎನ್ನುವ
ಹಿಮವಂತನ ರಾಜ್ಯದಲ್ಲಿ ಸೂರ್ಯನು ಪ್ರಖರತೆಯನ್ನು ಕಳೆದುಕೊಂ
ಸೌಮ್ಯನಾದನು. ಚಂದ್ರನು ಪಾಂಡುರ ವರ್ಣವನ್ನು ತಳೆದನು. ತ
ತಾಯಿಗಳು ಮಗುವಿನ ಉಜ್ವಲವಾದ ಗೌರ ಕಾಂತಿಯನ್ನು ನೋಡಿ ಅ
ಳಿಗೆ ಗೌರಿ ಎಂದು ನಾಮಕರಣ ಮಾಡಿದರು.

ಗೌರಾಂಗಿಯಾದ ಗೌರಿಯ ಸುವರ್ಣ ವರ್ಣದಿಂದ ಸಕಲರ ಮನಸ
ಆಕರ್ಷಿತವಾಗತೊಡಗಿತು. ವಸಂತಕಾಲದಲ್ಲಿ ಹೂದೋಟದಲ್ಲಿ ಬಗೆ ಬಗೆ
ಹೂಗಳು ಅರಳಿ ನಾಲ್ದೆಸೆಗೂ ಸುಗಂಧವನ್ನು ಬೀರುತ್ತಿದ್ದರೂ ಭ್ರಮರ
ಮನಸ್ಸು ಬಾಲಚೂತದ ನವ ಕುಸುಮಾವಳಿಗಳ ಕಡೆಗೇ ಆಕರ್ಷಿತವಾ
ವಂತೆ ಸಕಲರ ಮನಸ್ಸೂ ಗೌರಿಯ ಅವರ್ಣನೀಯವೂ ಅನುಪಮವೂ ಅ
ಸುಂದರನ ಸುಕುಮಾರ ರೂಪಗುಣಗಳಿಂದ ಅಪಹರಿಸಲ್ಪಟ್ಟಿತು. ಪರ
ರಾಜನ ಬಳಗದವರು ಅವಳಿಗೆ ಪರ್ವತನ ಮಗಳಾದುದರಿಂದ **ಪಾರ್ವ**
ಯೆಂದು ಮತ್ತೊಂದು ಹೆಸರಿಟ್ಟರು.

ಈ ರೀತಿ ಪರ್ವತರಾಜನ ಮಗಳಾದ ಪಾರ್ವತಿಯು ತನ್ನ ಅಪ್ರತಿ
ರೂಪಗುಣಗಳಿಂದಲೂ ಅಗಮ್ಯವಾದ ಆಂತರಿಕ ಶಕ್ತಿಯಿಂದಲೂ ಸಕ
ಚಿತ್ತವನ್ನೂ ಹರಣಮಾಡಿ ಜಗತ್ತಿನಲ್ಲಿ ಹೊಸದೊಂದು ಚೈತನ್ಯವನ

ಹುಟ್ಟಿಸಿದಂತೆ ಭಾಸವಾಗತೊಡಗಿತು. ಪ್ರೀತಿ ಶಾಂತಿಗಳ ಮೂರ್ತಸ್ವರೂಪವೇ ಸರ್ವತ್ರ ಗೋಚರವಾಗಿ ಅಸೂಯೆ ಮತ್ಸರ ದ್ವೇಷ ಮುಂತಾದ ದುರ್ಭಾವನೆಗಳು ಅಡಗಿ ಹೋದುವು. ಮುದ್ದುಮಗು ಗೌರಿಯು ತನ್ನ ಓರಗೆಯ ಗೆಳೆಯರೊಡನೆ ಬೊಂಬೆಗಳನ್ನಿಟ್ಟುಕೊಂಡು ಆಟವಾಡುವುದನ್ನು ನೋಡಿದರೆ ಅದಾವುದೋ ಒಂದು ಕೋಮಲವಾದ ಪ್ರೇಮಲಭಾವನೆಯಿಂದ ಮುಗ್ಧನಾಗಿ ಮನುಷ್ಯನು ಮಂಕಾಗಿ ನಿಂತುಬಿಡುವನು. ತಂದೆತಾಯಿಗಳು ಅವಳ ಆ ಅಂದವಾದ ಆಟವನ್ನು ಕಂಡು ಆನಂದದಿಂದ ಮೈಮರೆಯುವರು. ಆಗ ಅವರಿಗಾಗುವ ಆನಂದ ಸೌಖ್ಯಗಳನ್ನೂ ಆ ಕಾಲದ ಅವರ ಮನಸ್ಸಿನ ಅವರ್ಣನೀಯವಾದ ಸ್ಥಿತಿಯನ್ನೂ ಒಳ್ಳೆಯ ಮಕ್ಕಳನ್ನು ಹಡೆದ ತಂದೆ ತಾಯಿಗಳು ಸ್ವಾನುಭವದಿಂದಲೇ ಕಲ್ಪಿಸಿಕೊಳ್ಳಬೇಕು.

ಪಾರ್ವತಿಯು ದಿನದಿನಕ್ಕೆ ದೊಡ್ಡವಳಾಗುತ್ತ ನಡೆದಳು. ಪುಸ್ತಕದ ಪುಟಗಳನ್ನು ತಿರುವುತ್ತ ನಡೆದಂತೆ ಹಗಲಿರುಳುಗಳೆಂಬ ಸೃಷ್ಟಿಯ ಪುಟಗಳು ಒಂದೊಂದಾಗಿ ತಿರುಗುತ್ತ ಹನ್ನೆರಡು ವರುಷಗಳು ಒಂದರ ಹಿಂದೊಂದು ಕಳೆದು ಹೋದುವು. ಬೂದಿಯನ್ನು ಊದಿ ಹಾರಿಸಲಾಗಿ ಕೆಂಡವು ಮತ್ತೆ ಉಜ್ವಲವಾಗುವಂತೆ ಜನ್ಮಾಂತರದಲ್ಲಿ ಸಂಚಿತವಾದ ಸಕಲ ವಿದ್ಯಾಬುದ್ಧಿಗಳೂ ಪಾರ್ವತಿಯಲ್ಲಿ ತಾವಾಗಿ ವ್ಯಕ್ತವಾದುವು. ತಂದೆತಾಯಿಗಳಿಗೂ ಬಂಧುಬಳಗದವರಿಗೂ ಗೌರಿಯ ಅತುಲವಾದ ಬುದ್ಧಿಶಕ್ತಿಯನ್ನು ನೋಡಿ ಆನಂದವಾಯಿತು; ಆಶ್ಚರ್ಯವಾಯಿತು; ಅದಾವುದೋ ಒಂದು ವಿಧವಾದ ಭಯಭಕ್ತಿಗಳಿಂದ ಮನಸ್ಸು ವಿನಯಾದರಗಳಿಂದ ಕೂಡಿ ಅವಳ ಅಂತರಂಗದೊಡನೆ ತನ್ಮಯವಾಗತೊಡಗಿತು.



## ಮೂರನೆಯ ಪರಿಚ್ಛೇದ



# ಪತಿಸೇವೆ.



ಅತುಲ ಶೋಭಾಮಯವಾದ ಹಿಮಾಲಯದೊಳ
ತಪೋವನದ ಪ್ರಾತಃಕಾಲವನ್ನು ವರ್ಣಿ
ಸುವುದು ಸುಲಭವಾದ ವಿಷಯವಲ್ಲ. ಪ್ರಾತಃ
ಲದ ಸೂರ್ಯನ ಕಿರಣಗಳು ಅಲ್ಲಿಯ ಗಿಡಗಳ ಹಸ
ರೆಲೆಗಳ ಮೇಲೆಯೂ ದೂರದಲ್ಲಿರುವ ಸ್ಫಟಿಕ ಸ್ವಚ್ಛವಾದ ಹಿಮರಾಶಿಗ
ಮೇಲೆಯೂ ತರತರದ ಬಣ್ಣದ ಹೂಗಳ ಮೇಲೆಯೂ ಬಿದ್ದು ಪರಾವರ್ತಿ
ವಾಗಿ ಒಂದರೊಡನೊಂದು ಬೆರೆದು ವಿಚಿತ್ರವಾದ ಸೃಷ್ಟಿಸೌಂದರ್ಯವನ
ಉಂಟುಮಾಡುವುವು. ಅಪ್ರತಿಮವಾದ ಸೃಷ್ಟಿಸೌಂದರ್ಯದೊಡನೆ ನಿರ್ಜನ
ಯಿಂದುಂಟಾದ ಸ್ವಾಭಾವಿಕವೂ ನಿಶ್ಚಲವೂ ಆದ ಶಾಂತಿಯು ಕೂಡುವು
ರಿಂದ ಆ ಸೃಷ್ಟಿಸೌಂದರ್ಯದ ರಾಶಿಯು ಪ್ರೇಕ್ಷಕರ ಹೃದಯದಲ್ಲಿ ಅವರ್ಣ
ನೀಯವಾದ ಆನಂದ ಆಶ್ಚರ್ಯ ಭಯಗಳ ಮಿಶ್ರಣದಿಂದುಂಟಾದ ಶಾಂ
ಯುಕ್ತವಾದ ಮನೋಭಾವವನ್ನು ಹುಟ್ಟಿಸುವುದು. ಮನುಷ್ಯನು ಇ
ನ್ನೆಲ್ಲ ನೋಡಿ ತಟಸ್ಥನಾಗುವನು. ಸೃಷ್ಟಿಕರ್ತನ ಅಗಾಧವಾದ ಕಾರ್ಯ
ಕುಶಲತೆಯನ್ನು ನೆನೆದು ಹೃದಯವು ಭಕ್ತಿರಸದಿಂದ ತುಂಬಿಬರುವುದ
ಕಣ್ಣುಗಳ ತಾವಾಗಿ ಮುಚ್ಚಿಕೊಳ್ಳುವುವು. ಬಹಿರಿಂದ್ರಿಯಗಳು ನಿಶ್ಚ
ವಾಗುವುವು. ಅಂತರಿಂದ್ರಿಯಗಳೆಲ್ಲ ಒಂದೊಂದಾಗಿ ಆ ಮಹಾ ಮಹಿಮ
ನಿರ್ಗುಣ ನಿರ್ವಿಕಾರ ಸ್ವರೂಪದಂತೆ ನಿರ್ಗುಣವೂ ನಿರ್ವಿಕಾರವೂ ಆ
ಪ್ರೇಕ್ಷಕನು ಅದೊಂದು ವಿಧವಾದ ಸಮಾಧಿಸ್ಥಿತಿಯನ್ನೇ ಅನುಭವಿಸುವ

ಇಂತಹ ಅವರ್ಣನೀಯವಾದ ಸೃಷ್ಟಿಸೌಂದರ್ಯದ ರಾಶಿಯು ಮ
ದಲ್ಲಿರುವ ಪರ್ವತರಾಜನ ಅರಮನೆಯಲ್ಲಿ ಪಾರ್ವತೀದೇವಿಯು ಪರಮ

ನಂದದಿಂದ ಪರಮಾತ್ಮನ ಧ್ಯಾನದಲ್ಲಿ ಸದಾನಿರತಳಾಗಿ ಮೆರೆಯುತ್ತಿರುವಳು. ಅವಳ ನಡೆನುಡಿಗಳಲ್ಲಿಯೂ ಆಟಪಾಟಗಳಲ್ಲಿಯೂ ಎಲ್ಲೆಡೆಯಲ್ಲಿಯೂ ಈಶ್ವರ ಭಕ್ತಿಯೇ ವ್ಯಕ್ತವಾಗುವುದು. ಒಂದು ದಿನ ಅವಳು ತನ್ನ ಗೆಳತಿಯರಿಂದೊಡಗೂಡಿ ನೆರೆಯಲ್ಲಿರುವ ಪುಣ್ಯಸಲಿಲವಾಹಿನಿ ಗಂಗಾನದಿಯ ದಂಡೆಗೆ ಹೋಗಿ ಆಟವನ್ನು ಹೂಡಿದ್ದಳು. ಅವರೆಲ್ಲರೂ ಕೂಡಿ ಭಾಗೀರಥಿಯ ಮೃದುವಾದ ಮೃತ್ತಿಕೆಯಿಂದ ಸತೀ ಶಂಕರರ ಎರಡು ಪ್ರತಿಮೆಗಳನ್ನು ರಚಿಸಿ ಸತಿಗೆ ಶಂಕರನೊಡನೆ ವಿವಾಹವನ್ನು ನೆರವೇರಿಸುವ ಸಮಾರಂಭವನ್ನು ಆರಂಭಿಸಿದ್ದರು. ಅವರಲ್ಲಿಯೇ ಕೆಲವರು ವರಪಕ್ಷದವರಾಗಿದ್ದರು. ಮತ್ತೆ ಕೆಲವರು ವಧೂಪಕ್ಷದವರಾಗಿದ್ದರು. ಆಟವು ಒಳ್ಳೆಯ ಭರಕ್ಕೆ ಬಂದಾಗ ದೂರದಲ್ಲಿ ಮೃದು ಮಧುರವಾದ ವೀಣಾನಾದದೊಂದಿಗೆ ಹರಿನಾಮ ಸಂಕೀರ್ತನೆಯು ಕೇಳಿ ಬರತೊಡಗಿತು. ಗಾಯನದ ಧ್ವನಿಯು ಬರಬರುತ್ತ ಸ್ಪಷ್ಟವಾಗುತ್ತ ಬಂದಿತು.

ಆಟದಲ್ಲಿ ತೊಡಗಿದ್ದ ಬಾಲೆಯರೆಲ್ಲರೂ ಆ ಅಮೋಘವಾದ ತಾತ್ವಿಕ ವಿಚಾರದಿಂದ ಕೂಡಿದ ಹಾಡನ್ನು ಕೇಳಿ ತಟ್ಟನೆ ಎಚ್ಚತ್ತು ತಮ್ಮ ಆಟವನ್ನು ನಿಲ್ಲಿಸಿ ಆಗಂತುಕನನ್ನು ತುಂಬ ಕುತೂಹಲದಿಂದ ನೋಡತೊಡಗಿದರು. ಆದಿಮಾಯೆಯಾದ ಪಾರ್ವತಿಯು ಆ ಅನುಪಮವಾದ ಹಾಡಿನ ಗೂಢ ಭಾವದಲ್ಲಿ ತಲ್ಲೀನಳಾಗಿ ಕ್ಷಣಹೊತ್ತು ಸ್ತಬ್ಧಳಾಗಿ ನಿಂತಿದ್ದಳು. ಅಷ್ಟರಲ್ಲಿ ಆಗಂತುಕನು ಅವರ ಬಳಿಗೆ ಬಂದು ಪಾರ್ವತೀದೇವಿಯ ಪಾದಗಳಿಗೆರಗಿ "नारायणि नमस्तेस्तु ××× " ಎಂದು ಸ್ತುತಿಯನ್ನು ಆರಂಭಿಸಿದನು. ಇದನ್ನು ಕಂಡು ಪಾರ್ವತೀ ದೇವಿಯು:– "ಏನು ಸ್ವಾಮೀ, ಮುಪ್ಪಿನಿಂದ ತಮ್ಮ ಬುದ್ಧಿಯು ಮರುಳಾದಂತೆ ತೋರುವುದಲ್ಲ? ನಿಮ್ಮಂತಹ ಹಿರಿಯರು, ಮುಪ್ಪಿನ ಮುದುಕರು, ನಮ್ಮಂತಹ ಎಳೆಯ ಮಕ್ಕಳಿಗೆ ನಮಸ್ಕಾರ ಮಾಡುವುದು ಅನ್ಯಾಯವಲ್ಲವೇ? ಹಿರಿಯರು ಕಿರಿಯರಿಗೆ ಆಶೀರ್ವಾದ ಮಾಡಬೇಕಲ್ಲದೆ ನಮಸ್ಕಾರ ಮಾಡಿದರೆ ಅದು ಅವರ ಅಮಂಗಲಕ್ಕೆ ಕಾರಣವಾಗುವುದಂತೆ. ಇದೇನು ಅವಿಚಾರವನ್ನು ನಡೆಯಿಸಿರುವಿರಿ?" ಎಂದು ಮುಂಗೋಪವನ್ನು ಪ್ರಕಟಿಸಿ ನುಡಿದಳು.

ಆಗಂತುಕನು ಕಿಲಕಿಲನೆ ನಕ್ಕನು. "ನಾನು ವೃದ್ಧನು! ನೀನ ಚಿಕ್ಕ ಮಗು! ವಾ! ಒಳ್ಳೆಯ ಸಮಾಚಾರವನ್ನು ಹೇಳಿದೆಯಮ್ಮಾ! ನ ಗಿಂತಲೂ ಸಾವಿರಾರು ವರ್ಷಕ್ಕೆ ಹಿರಿಯನಾದ ಮುದುಕನನ್ನು ಮದು ಮಾಡಿಕೊಳ್ಳುವಾಗ ಏನು ಮಾಡುವೆಯೋ ಅವನೆಷ್ಟು ಮರುಳಸಿರುವನೋ ನೋಡೋಣ! ಆ ವಿಚಾರಕ್ಕಾಗಿಯೇ ನಾನು ಇಷ್ಟು ದೂರ ಇಷ್ಟು ಕಷ ಪಟ್ಟು ಬಂದಿರುವೆನು." ಎಂದು ಪರಿಹಾಸದೊಡನೆ ನುಡಿದನು.

ಆಗಂತುಕನ ಮಾತು ಕೇಳಿ ಪಾರ್ವತಿಯು ಗೆಳತಿಯರೆಲ್ಲರೂ ಬೆರಗಾ ನಿಂತರು. ಅವನಾರೆಂಬುದಾಗಲಿ, ಅವನು ಏನು ಹೇಳುವನೆಂಬುದಾಗ ಯಾರಿಗೂ ತಿಳಿಯಲಿಲ್ಲ. ಆದಿಮಾಯೆಯಾದ ಭವಾನಿಗೆ ಮಾತ್ರ ಯಾವುದ ತಿಳಿಯದುಳಿಯಲಿಲ್ಲ; ಆದರೂ ಉಳಿದವರೊಡನೆ ನಾಚಿಕೆಯನ್ನು ನಟಿಸುತ್ತ ಅರಮನೆಯ ಹಾದಿಯನ್ನು ಹಿಡಿದು ನಡೆದಳು.

ಪರ್ವತರಾಜನೂ ಮೇನಾದೇವಿಯೂ ನಾರದ ಮಹಾಮುನಿಗ ಆಗಮನದ ವಾರ್ತೆಯನ್ನು ಕೇಳಿ ಇದಿರು ಬಂದು ಅರ್ಘ್ಯಪಾದ್ಯಾದಿಗಳಿಂ ಸತ್ಕರಿಸಿ ಕರೆದೊಯ್ದು ಉಚಿತಾಸನದಲ್ಲಿ ಕುಳ್ಳಿರಿಸಿದರು. ಪ್ರಸಂಗೋಚಿ ವಾದ ಮಾತುಕತೆಗಳು ನಡೆದ ತರುವಾಯ ನಾರದರು ಪಾರ್ವತೀ ದೇವಿಯ ಪ್ರಸ್ತಾವವನ್ನು ಆರಂಭಿಸಿದರು.

**ನಾರದ:—** ರಾಜನೇ, ಜಗಜ್ಜನನಿಯಾದ ಆದಿಶಕ್ತಿಯು ಜಗತ್ತಿ ಸೃಷ್ಟಿ ಸ್ಥಿತಿಲಯಗಳ ಕರ್ತ್ರಿ. ಅವಳನ್ನು ನೀವು ಈ ರೀತಿ ಮೋ ಜಾಲದಲ್ಲಿ ತೊಡಗಿಸಿಕೊಂಡು ಎಷ್ಟು ಕಾಲ ಕುಳಿತಿರಬೇಕೆನ್ನುವಿರಿ? ದೇವಾ ದೇವ ಮಹಾದೇವನು ಅತ್ತ ಆ ಪರಿಯಾಗಿ ತನ್ನ ಕರ್ತವ್ಯವನ್ನು ಮರೆ ಯೋಗಾರೂಢನಾಗಿ ತಪೋವನವಾಸಿಯಾಗಿ ಕುಳಿತಿರುವನು. ಆ ಮಾಯೆಯು ಈ ರೀತಿ ಹಸುಗೂಸುಗಳೊಡನೆ ಮಕ್ಕಳಾಟದಲ್ಲಿ ಮೈ ರೆತು ಸತೀಶಂಕರರ ವಿವಾಹವನ್ನು ಹೂಡಿ ಆಟವಾಡುವದರಲ್ಲಿ ತೊಡಗಿ ವಳು. ನೀವು ಇದನ್ನೆಲ್ಲ ನೋಡಿ ಆನಂದಪಡುತ್ತ ಅವಳನ್ನು ಕರ್ತವ್ಯವಿಮ ಖಳನ್ನಾಗಿ ಮಾಡುವಿರಾದರೆ ನಮ್ಮ ಗತಿಯೇನು? ದೇವತೆಗಳ ಹಾಡೇನು ಕಣ್ಣಾಗಿಣದ ಮಾನವರ ಪಾಡೇನು?

ಪರ್ವತರಾಜನೂ ಮೇನಾದೇವಿಯೂ ಆಶ್ಚರ್ಯವನ್ನು ವ್ಯಕ್ತಪಡಿಸುತ್ತ ತಮ್ಮ ಅಜ್ಞಾನ ಮೂಲಕವಾದ ಅಪರಾಧವನ್ನು ಸಮ್ಮತಿಸುವರೋ ಎಂಬ ಮುಖಭಾವವನ್ನು ತಳೆದು –" ಆರ್ಯರೇ, ತಾವೆನ್ನುವ ಮಾತು ನಿಜವಾಗಿದ್ದರೂ ನಾವಷಕ್ಕೆ ಸಂಪೂರ್ಣ ಹೊಣೆಗಾರರಲ್ಲವೆಂದು ನಮಗೆ ತೋರುವುದು. ಲೋಕದಲ್ಲಿ ಸ್ವಾರ್ಥವು ಯಾರನ್ನೂ ಬಿಟ್ಟಿಲ್ಲ. ಲೋಕಮಾತೆಯ ಸಾನ್ನಿಧ್ಯವನ್ನು ಬಯಸಿ ಬಹುಕಾಲ ತಪಸ್ಸು ಮಾಡಿ ಆ ಮಹಾಮಹಿಮಳ ಕೃಪೆಯಿಂದ ಪಡೆದುಕೊಂಡ ಅಮೋಘವಾದ ಸುಖವನ್ನು ನಾವು ಅನಂತ ಕಾಲದವರೆಗೆ ಬಯಸುವೆವು; ನಮಗದು ಸಾಧ್ಯವಲ್ಲವೆಂಬುದನ್ನೂ ಅರಿತಿರುವೆವು. ಕಾಲವು ಕೂಡಿ ಬಂದೊಡನೆಯೇ ಆ ಜಗದಂಬೆಯು ನಮ್ಮನ್ನು ಅಗಲಿ ಹೋಗುವಳೆಂಬುದನ್ನು ನಾವು ಮರೆತಿಲ್ಲ. ಇಂತಿರುವುದರಿಂದ, ನಾವಾಗಿ ಅವಳನ್ನು ಹೋಗೆನ್ನುವಷ್ಟು ಉದಾತ್ತ ವಿಚಾರವು ನಮ್ಮಲ್ಲಿಲ್ಲವೆಂದ ಮಾತ್ರಕ್ಕೆ, ನಾವು ಅಪರಾಧಿಗಳಾಗುವ ಬಗೆಯೆಂತು? ಇರಲಿ, ತಮ್ಮ ಅಭಿಪ್ರಾಯವೇನೆಂಬುದನ್ನಷ್ಟು ಸೂಚಿಸಿ ನಮಗೆ ನಮ್ಮ ಕರ್ತವ್ಯದ ನೆನಪು ಮಾಡಿಕೊಟ್ಟರೆ ಸಕಲ ಲೋಕಗಳ ಕಲ್ಯಾಣವನ್ನು ನೆನೆದು ಸ್ವಸುಖಾಭಿಲಾಷೆಯನ್ನು ಬದಿಗೊತ್ತಲು ಯತ್ನಿಸುವೆವು." ಎಂದರು.

**ನಾರದ:—** ಬಲು ಜಾಣತನದ ಮಾತಿದು. ತಪ್ಪನ್ನು ತಪ್ಪೆಂದು ಒಪ್ಪಿಕೊಂಡವರು ತಪ್ಪುಗಾರರೇ ಅಲ್ಲವೆನ್ನುವುದುಂಟು. ಜಗದಂಬೆ ಪಾರ್ವತೀದೇವಿಯು ಅರಿತೂ ಅರಿಯದವಳಂತೆ ನಟಿಸುತ್ತ ಕಾಲಕಳೆಯುವುದು ನಮ್ಮೆಲ್ಲರಿಗೂ ತುಂಬ ಕಷ್ಟಕರವಾಗಿರುವುದು. ಸತಿಯ ವಿಯೋಗದಿಂದ ಭ್ರಾಂತನಾಗಿ ಯೋಗಾರೂಢನಾದ ಶ್ರೀಶಂಕರನ ಮನಸ್ಸನ್ನು ಶಾಂತಗೊಳಿಸಿ ಆತನನ್ನು ಪುನಃ ಕರ್ತವ್ಯ ಮಾರ್ಗಕ್ಕೆ ತರುವುದು ಆ ಜಗದಂಬೆಯ ಹೊರತು ಇನ್ನಾರಿಗೂ ಸಾಧ್ಯವಾದ ಮಾತಲ್ಲ. ಆದುದರಿಂದ ನೀವು ನಿಮಗಾಗುವ ವಿಯೋಗದುಃಖವನ್ನು ಲೆಕ್ಕಿಸದೆ ಪಾರ್ವತೀದೇವಿಯನ್ನು ನೆರೆಯ ತಪೋವನದಲ್ಲಿ ಯೋಗಾರೂಢನಾಗಿ ಕುಳಿತಿರುವ ಭವಾನೀಪತಿಯ ಸನ್ನಿಧಿಗೆ ಕಳುಹಲೇಬೇಕು.

ನಾರದರ ಮಾತುಗಳನ್ನು ಕೇಳಿ ಪರ್ವತರಾಜನೂ ಮೇನಾದೇವಿಯೂ ಅತಿಶಯ ಆನಂದಪಟ್ಟರು. ಜಗದಂಬೆಯು ಮಗಳಾಗಿ ಜನಿಸಿದಂತೆ ದೇವಾಧಿ

ದೇವ ಮಹಾದೇವನು ನಿರಾಯಾಸವಾಗಿ ಒಲಿಯುವನಾಗುವನೆಂಬ ವಿಚಾರ ಅವರಲ್ಲಿ ಅಮಿತ ಆನಂದವನ್ನುಂಟು ಮಾಡಿತು. ಅವರು ಮಗಳ ಪಾರ್ವತಿಯನ್ನು ಕರೆದು ನಾರದರ ಹೇಳಿಕೆಯನ್ನು ತಿಳಿಸಿ ಜಯಾವಿಜಯೆ ರೆಂಬ ಗೆಳತಿಯರೊಂದಿಗೆ ಮಹಾದೇವನ ತಪೋವನಕ್ಕೆ ಹೋಗಿ ಆತನನ್ ಭಕ್ತಿಯಿಂದ ಅರ್ಚಿಸಿ ಮೆಚ್ಚಿಸಬೇಕೆಂದು ಉಪದೇಶಿಸಿದರು. ನಾರದರ ತಾವು ಬಂದ ಕಾರ್ಯವು ಕೊನೆಗಂಡಿತೆಂದು ಆನಂದದಿಂದ ಓಷಧಿ ಪ್ರ ದಿಂದ ಮತ್ತೆಲ್ಲಿಗೋ ಪ್ರಯಾಣ ಬೆಳೆಸಿದರು.

ಹಿಮಾಲಯದ ಹಿಮಾವೃತವಾದ ಪರ್ವತ ಶ್ರೇಣಿಗಳ ಮಧ್ಯದಿಂ ದೇವದಾರು ಗಿಡಗಳ ಗುಂಪುಗಳೊಳಗಿಂದ ಪತಿತಪಾವನಿ - ಪತಿತೋದ ರಿಣಿ - ಗಂಗಾಮಾತೆಯು "ಕುಲು ಕುಲು" ನಿನಾದದೊಡನೆ ಭೂಲೋಕಕ ಇಳಿದು ಬರುತ್ತಿರುವಳು. ಕಸ್ತೂರಿಯ ಸುವಾಸನೆಯಿಂದ ಕೂಡಿದ ಮಂ ಮಾರುತನು ಗಂಗೆಯ ತಂಪಾದ ಕಣಗಳನ್ನು ಕೂಡಿಕೊಂಡು ಆ ರಮ್ಯವಾ ಸ್ಥಳದಲ್ಲಿ ಸುಳಿಯುತ್ತಿರುವನು. ತಪಸ್ವಿಗಳ ಮಾನರಕ್ಷಣೆಗೈವ ನಾ ರುಡುಗೆಗಾಗಿ ಬಹು ಕಾಲದಿಂದಲೂ ತಮ್ಮ ಮೈದೊಗಲನ್ನು ನೀಡಿದ ಗಿ ಗಳು ಬರಿಮೈಯಿಂದ ನಿಂತಿರುವ ಮುದುಕರ ಹಾಗೆ ಪರೋಪಕಾರ ವ್ರ ಗಳಾಗಿ ತೋರುವುವು. ತರುಣಿಯರ ಕರ್ಣಭೂಷಣವನ್ನು ಕಾಂತಿಗುಂದಿ ನಾಚಿಸುವಂತಹ ಸುರಸಂಪಿಗೆಯ ಹೂಗಳು ತನಿಗಾಳಿಗೆ ತೊನೆಯುತ್ತಿ ವುವು. ಅಲ್ಲಲ್ಲಿಗೆ ಹರಡಿರುವ ಮನಃಶಿಲೆಯ ಹುಡಿಯ ಕೆಂಪು ಮಿಶ್ರಿತ ಅರಿ ಬಣ್ಣವು ಅತ್ಯುಜ್ಜ್ವಲವಾದ ಮಾಣಿಕ್ಯದ ಕಾಂತಿಯನ್ನು ಅಲ್ಲಗಳೆಯುವುದ ಶಿಲಾಜಿತುವಿನಿಂದ ಆವೃತವಾದ ಶಿಲಾತಲಗಳಿಂದ ಆ ತಪೋವನಕ್ಕುಂಟಾ ಸೊಬಗನ್ನು ಬಣ್ಣಿಸಲಳವಲ್ಲ.

ಆ ಮನೋಹರವೂ ಗಂಭೀರವೂ ಉದಾರವೂ ಶಾಂತವೂ ಆದ ತಪೋ ವನದಲ್ಲಿ ಪರಿವಾರಯುಕ್ತವಾದ ಭೂತನಾಥನು ತಪಶ್ಚರಣೆಗಾಗಿ ಬಂದ ನಿಂದಂತೂ ಆ ಸ್ಥಳದ ಸ್ವಾಭಾವಿಕವಾದ ಮನೋಹರತೆ ಗಂಭೀರತೆ ಉದ ರತೆ ಶಾಂತತೆಗಳು ಸುಮನೋಹರ ಗಂಭೀರತರ ಪರಮೋದಾರ ಪ್ರಶಾಂ ಮಯವಾಗಿ ಪರಿಣಮಿಸಿದುವು. ಶಿವನ ಅನುಚರರಾದ ಭೂತಗಣಗಳು ಪ್ರ ನಿತ್ಯ ಬೆಳಗಾಗುತ್ತಲೇ ಆ ಪವಿತ್ರವಾದ ಗಂಗೆಯಲ್ಲಿ ಮಿಂದು ವಲ್ಕ

ನನ್ನಿಟ್ಟು ಕಿವಿಗಳಲ್ಲಿ ಸುರಸಂಪಿಗೆಯ ಹೂವುಗಳ ಕರ್ಣಭೂಷಣವನ್ನಿಟ್ಟು ಕೊಂಡು ವ್ಯಾಘ್ರಚರ್ಮ ಶಿಲೆಯ ಹುಡಿಯನ್ನು ತೊಡೆದುಕೊಂಡು ಒಂದೊಂದು ಬಂಡೆಗಲ್ಲಿನ ಮೇಲೆ ಹೋಗಿ ಆಸನವನ್ನು ಹಾಕಿಕೊಂಡು ಈಶ್ವರ ಪಾದಾರ್ಪಿತ ಮಾನಸರಾಗಿ ಆನಂದಪರವಶರಾಗಿ ಕುಳಿತುಕೊಳ್ಳುವರು.

ಲೋಕದೊಳಗಿನ ಅಖಿಲ ತಪಸ್ವಿಗಳ ತಪಸ್ಸಿನ ಫಲದಾತನಾದ ಭಗವಂತನು ಇನ್ನಾವ ಶಕ್ತಿಯ ಸಾಧನೆಗಾಗಿ ತಪಸ್ಸನ್ನಾಚರಿಸುವನೋ ಎಂದು ಜಗವೆಲ್ಲ ಬೆರಗಾಗಿರಲು ಶಂಕರನು ಆ ತಪೋವನದೊಳಗಿನ ಎತ್ತರವಾದೊಂದು ಬಂಡೆಗಲ್ಲಿನ ಮೇಲೆ ಹರಿಣಾಜಿನವನ್ನು ಹಾಸಿ ಸಕಲೇಂದ್ರಿಯಗಳನ್ನೂ ಸ್ಥಿರಗೊಳಿಸಿ ಯೋಗಾರೂಢನಾಗಿ ಕುಳಿತಿರುವನು. ಆತನ ಸ್ಫಟಿಕದಂತೆ ಸ್ವಚ್ಛವಾದ ಬಿಳಿಯ ಶರೀರದಿಂದ ಉಜ್ವಲವಾದ ತೇಜಸ್ಸು ನಾಲ್ಕು ದಿಕ್ಕುಗಳಿಗೂ ಪಸರಿಸಿ ನೋಡುವವರ ಕಣ್ಣುಗಳನ್ನು ಕುಕ್ಕುವುದು. ಹಣೆಯೊಳಗಿನ ಕಿಡಿಗಣ್ಣು ಸಂತಪ್ತವಾಗಿ ಕಿಡಿಗಳನ್ನು ಕಾರುವುದೋ ಎಂಬಂತೆ ಕೆಂಡದಂತೆ ತೋರುವುದು. ತಲೆಯ ಮೇಲಿನ ಚಂದ್ರನೂ ಗಂಗೆಯೂ ನಾಗನೂ ಶಂಕರನೊಡನೆ ಸಮಭಾವದಿಂದ ಸಮಾಧಿಸ್ಥಿತಿಯನ್ನು ಅನುಭವಿಸುವಂತೆ ತೋರುವರು.

ತಪೋವನದ ಮಹಾದ್ವಾರದ ಬಳಿಯಲ್ಲಿ ಗಣಾಧಿಪತಿಯೂ ಶಂಕರನ ವಾಹನವೂ ಆದ ನಂದಿಯು ದ್ವಾರಪಾಲಕನಂತೆ ತಾನೊಂದು ಬಂಡೆಗಲ್ಲಿನ ಮೇಲೆ ಶಾಂತಚಿತ್ತನಾಗಿ ಕುಳಿತಿರುವನು. ಆತನ ಶಾಸನ ಭಯದಿಂದಲೋ ಏನೋ ಎಂಬಂತೆ ತಪೋವನದಲ್ಲಿ ಗಾಳಿಯು ಕೂಡ ಬಹು ಶಾಂತವಾಗಿ ತೀಡುವುದು. ಕೆಳಗಡೆಯಲ್ಲಿ ಪ್ರವಹಿಸುವ ಗಂಗೆಯು ಮಂಜುಳನಾದಗೈವಳು. ಪಶುಪಕ್ಷಿ ಕ್ರಿಮಿಕೀಟಕಗಳೂ ಬಹು ಶಾಂತ ಭಾವವನ್ನು ತಳೆದಿರುವುವು.

ಈ ರೀತಿ ಸದಾ ಶಾಂತ ಪ್ರಶಾಂತವಾಗಿರುವ ತಪೋವನದಲ್ಲಿ ಒಂದು ದಿನ ಪ್ರಾತಃಸಮಯದಲ್ಲಿ ದೂರದಲ್ಲಿ ಕಾಲಂದುಗೆ ನೂಪುರಗಳ ಮಂಜುಳ ನಾದವು ಕೇಳಬಂದಿತು. ಸ್ತಬ್ಧವೂ ಗಂಭೀರವೂ ಆದ ತಪೋವನವು ಆ ನೂಪುರಗಳ ಧ್ವನಿಯೊಡನೆ ಕ್ಷಣಕಾಲ ಚಂಚಲವಾದಂತೆ ತೋರಿತು. ಕ್ಷಣಾರ್ಧದಲ್ಲಿ ಅಜ್ಞಾತವಾದೊಂದು ವಿದ್ಯುತ್‌ಶಕ್ತಿಯ ಪ್ರವಾಹದಿಂದ

ಆ ತಪೋವನವಾಸಿಗಳ ಅಂತರಂಗವು ತಟ್ಟನೆ ನಡುಗಿತು. ಆ ನಿಸ್ತಬ್ಧವಾ
ತಪೋವನವೂ ಆವುದೋ ಒಂದು ವಿಧವಾದ ಆನಂದಭಾವನೆಯಿಂದ ಪಕ
ವಾಗಿ ತೋರಿತು. ದೂರದಲ್ಲಿ ಕೇಳಬರುತ್ತಿದ್ದ ನೂಪುರಗಳ ಧ್ವನಿಯ
ಸ್ಪಷ್ಟತರವಾಗುತ್ತ ಬಂದು ಕೊನೆಗೆ ನಂದಿಯು ಕುಳಿತಿರುವ ಮಹಾದ್ವಾರ
ವರೆಗೆ ಬಂದ ಕೂಡಲೆ ನಿಂತುಹೋಯಿತು. ತಪೋವನದ ಶಾಂತತೆಗೆ ಹೊ
ಗಾರನಾದ ನಂದಿಯು ನೂಪುರಗಳ ಧ್ವನಿಯನ್ನು ಕೇಳಿ ಆಶ್ಚರ್ಯವಿಸ್ಮಯ
ಗಳಿಂದ ಬೆಪ್ಪಾಗಿ ಕುಳಿತಿದ್ದವನು ಈಗ ನಾಲ್ಕು ಕಡೆಗೂ ಸಂಶಯ ಚಕಿ
ದೃಷ್ಟಿಯಿಂದ ನೋಡಿದನು. ಇದಿರಿಗೆ ಸುರಲೋಕದ ಅಪ್ಸರೆಯನ್ನು ನಿ
ಸುವ ಸರ್ವಾಂಗಸುಂದರಿಯಾದ ಬಾಲೆಯೊಬ್ಬಳು ಕೈಯಲ್ಲಿ ಪೂಜಾಸಾಹಿ
ಗಳನ್ನು ಹಿಡಿದುಕೊಂಡು ಅವನತದೃಷ್ಟಿಯಾಗಿ ವಿನಯ ಸಭ್ಯತೆ ಸದಾಚಾ
ಸದ್ಭಾವನೆಗಳ ಪ್ರತಿಬಿಂಬವೆಂಬಂತೆ ತೋರುತ್ತ ನಿಂತಿದ್ದಳು. ಎಡಬಲಗಳಲ್
ಮತ್ತಿಬ್ಬರು ಸಾಮಾನ್ಯ ಉಡುಗೆತೊಡುಗೆಗಳಿಂದ ಒಪ್ಪುವ ರಮಣಿಯರು
ನಿಂತಿದ್ದರು. ನಂದಿಗೆ ತಾನೇನು ಕನಸು ಕಾಣುವೆನೋ ನಿಜವಾಗಿಯು
ಇವರಾರೋ ಅಪ್ಸರೆಯರು ಶಿವಾರ್ಚನೆಗಾಗಿ ಬಂದಿರುವರೋ ನಿರ್ಣಯ
ವಾಗಲಿಲ್ಲ. ಅಂತರಂಗದಲ್ಲಿ ಅಜ್ಞಾತವಾದೊಂದು ಭಕ್ತಿಭಾವನೆ ಹುಟ
ಬೆಳೆದು ಪ್ರವಾಹಗೊಂಡು ಅವಯವಗಳಲ್ಲಿ ಸಂಚರಿಸತೊಡಗಿ ಇಂದ್ರಿಯ
ಗಳ ಕಾರ್ಯವನ್ನು ಪ್ರತಿಬಂಧಿಸಿಬಿಟ್ಟಿತು. ಶಿರವು ಬಾಗಿತು. ಕಣ್ಣುಗಳ
ಮುಚ್ಚಿದುವು. ಕೈಗಳು ತ್ರಿಶೂಲವನ್ನು ಚಲ್ಲಿ ತಾವಾಗಿ ಕೂಡಿ ಹಣೆಯ
ಹತ್ತಿರಕ್ಕೆ ಹೋದುವು. ನಾಲಗೆಯು "ಅಮ್ಮಾ" ಎಂದು ಅಸ್ಪಷ್ಟವಾ
ದ್ದರೂ ಸ್ಫುಟವಾಗಿ ನುಡಿಯಿತು. ಈ ರೀತಿ ನಂದಿಯು ತಾಯಿಯನ್ನು
ಕಳೆದುಕೊಂಡ ಎಳೆಮಗುವು ತಾಯಿಯ ನೆನಪಾದಾಗ ಅನುಭವಿಸುವಂತ
ಎಲ್ಲ ವಿಧದ ಮಾತೃಭಕ್ತಿಯನ್ನನುಭವಿಸುತ್ತಿರಲು ಆ ಬಾಲಿಕೆಯು ಮುಗುಳ
ಗೆಯಿಂದ ತಪೋವನದ ಪವಿತ್ರವಾದ ತಪಃಪ್ರಭೆಯನ್ನು ಮಲಿನಮಾಡುತ್ತ
ಶಂಕರನ ಸನ್ನಿಧಿಗೆ ನಡೆದಳು. ಆಸನಾರೂಢನಾಗಿ ಶಾಂತಭಾವದಿಂ
ಯೋಗಾಸಕ್ತನಾದ ಶಂಕರನ ಮೂರ್ತಿಯನ್ನು ನೋಡಿ ಪಾರ್ವತೀದೇವಿಯು
ಭಯಭಕ್ತಿ ವಿನಯಾದರಗಳಿಂದ ಆತನ ಪಾದಕ್ಕೆರಗಿದಳು. ತರುವಾಯ ಸುತ್ತ
ಲಿನ ಸ್ಥಳವನ್ನೆಲ್ಲ ಪರಿಷ್ಕರಿಸಿ ತಾನು ತಂದಿದ್ದ ಪೂಜಾಸಾಹಿತ್ಯಗಳಿಂದ ಮ

ನಣೆಯೆ ಆತನನ್ನು ಅರ್ಚಿಸಿದಳು. ಅಂತರಂಗದಲ್ಲಿ ಆನಂದದ ತರಂಗಗಳು ಉಕ್ಕಿ ಬರುತ್ತಿರಲು ಆತನನ್ನು ಧ್ಯಾನಿಸಿದಳು; ಭಜಿಸಿದಳು. ಶಂಕರನ ಮೌನ ಮೂಲಕವಾದ ಸಮ್ಮತಿಯನ್ನು ನೋಡಿ ಜಯಾವಿಜಯೆಯರಿಗೂ ಸಮಾಧಾನವಾಯಿತು.

ಇದೇ ರೀತಿ ಪಾರ್ವತೀದೇವಿಯು ಪ್ರತಿನಿತ್ಯ ಶ್ರೀಶಂಕರನ ಸೇವೆಯನ್ನು ಆರಂಭಿಸಿದಳು.

**ಅವಚಿತಬಲಿಪುಷ್ಪಾ ವೇದಿಸಂಮಾರ್ಗದಕ್ಷಾ ।**
**ನಿಯಮ ವಿಧಿಜಲಾನಾಂ ಬರ್ಹಿಷಾಂ ಚೋಪನೇತ್ರೀ ॥**
**ಗಿರಿಶಮುಪಚಚಾರ ಪ್ರತ್ಯಹಂ ಸಾಸುಕೇಶೀ ।**
**ನಿಯಮಿತಪರಿಖೇದಾ ತಚ್ಛಿರಶ್ಚಂದ್ರ ಪಾದೈಃ ॥ ೧ ॥**

[ಮಂಗಲಮಯವಾದ ಮುಂಗುರುಳುಗಳಿಂದ ಒಪ್ಪುತ್ತಿರುವ ಪಾರ್ವತೀದೇವಿಯು ಶಿವನ ಪೂಜೆಗಾಗಿ ಹೂವುಗಳನ್ನು ಕೂಡಿಸುವಳು; ಬಹು ಜಾಣ್ಮೆಯಿಂದ ವೇದಿಕೆಯನ್ನು ಉಡುಗಿ ಸ್ವಚ್ಛ ಮಾಡುವಳು; ನಿತ್ಯ ಕರ್ಮಗಳಿಗಾಗಿ ಬೇಕಾಗುವ ನೀರನ್ನು ತರುವಳು, ದರ್ಭೆಗಳನ್ನು ಸಂಗ್ರಹಿಸುವಳು; ಶಂಕರನ ಶಿರದಲ್ಲಿ ಮೆರೆಯುವ ಚಂದ್ರನ ಕಿರಣಗಳ ಶೀತಲತೆಯಿಂದ ಆಕೆಯ ಶ್ರಮವು ಕಡಿಮೆಯಾಗುವುದು. ಈ ರೀತಿ ಆಕೆ ದಿನಾಲು ಶ್ರೀಶಂಕರನ ಸೇವೆಯನ್ನು ಮಾಡುವಳು.]



## ನಾಲ್ಕನೆಯ ಪರಿಚ್ಛೇದ



## ಶಾಂತಿರಹಸ್ಯ.



ಈ ರೀತಿ ಪಾರ್ವತೀದೇವಿಯು ಶ್ರೀಶಂಕರನ ಸನ್ನಿ
ಯಲ್ಲಿ ಪರಮಾದರ ಭಕ್ತಿಯುಕ್ತಳಾಗಿ ಸೇವೆಯನ್ನ
ಮಾಡುತ್ತಿರಲು ದಿನಗಳು ಕಳೆದುವು; ವಾರಗಳ
ಸಾಗಿದುವು; ಪಕ್ಷಗಳು ಹೋದುವು; ತಿಂಗಳುಗಳ
ಮುಗಿದುವು. ಎಷ್ಟೋ ವರ್ಷಗಳಾದುವು. ಆದರೂ ಶಂಕರನ ತಪಸು
ಕೊನೆಗಾಣುವ ಲಕ್ಷಣವು ತೋರಲಿಲ್ಲ. ಆತನ ನಿರ್ಲಿಪ್ತ, ನಿಷ್ಕಾಮ
ನಿರ್ವಿಕಾರ ಹೃದಯದಲ್ಲಿ ಆಶೆ ಮೋಹ ಮಮತೆಗಳ ಛಾಯೆಯು ಕೂ
ಎಂದೂ ತಲೆದೋರಲಿಲ್ಲ. ಆತನ ನಿರ್ವಿಕಲ್ಪ ಚಿತ್ತದಲ್ಲಿ ಪಾರ್ವತಿಯ ವಿಷಯ
ವಾಗಿ ಎಳ್ಳಷ್ಟೂ ಪ್ರೇಮವು ಉದಯಿಸಲಿಲ್ಲ. ಆದುದರಿಂದ ಆಕೆಯ
ಈ ತೆರದ ಸೇವಾಶುಶ್ರೂಷೆಗಳೂ ಭಕ್ತಿಭಾವನೆಯೂ ವ್ಯರ್ಥವಾಗುವಂ
ತೋರಿದುವು. ಆದರೂ ಆಕೆಯ ಮನಸ್ಸಿನಲ್ಲಿ ಎಷ್ಟು ಮಾತ್ರವೂ ನಿರಾ
ಯುಂಟಾಗಲಿಲ್ಲ. ಆಕೆಯ ಆ ಅವಿಚಲವಾದ ಭಕ್ತಿಯಲ್ಲಿ ಚಲನೆಯ
ಭಾಸವಾಗಲಿಲ್ಲ.

ಲೋಕದಲ್ಲಿ ಕಾಲಚಕ್ರದ ಗತಿಯು ಬಹು ವಿಚಿತ್ರತರದ್ದಾಗಿರ
ಅದಕ್ಕೆ ಹಗಲು ರಾತ್ರಿಗಳೆಂಬಂತಿಲ್ಲ, ಕಷ್ಟಸುಖಗಳೆಂಬಂತಿಲ್ಲ, ಚಳಿಮಳೆಗಳ
ಬಂತಿಲ್ಲ. ಜಗತ್ತಿನಲ್ಲಿಯ ಇತರ ಯಾವ ಗತಿಗಳನ್ನೂ ಅದು ಅವಲಂಬಿಸಿಲ್ಲ
ಆ ಕಾಲಚಕ್ರದ ಗತಿಯನ್ನು ಮಾತ್ರ ಸೃಷ್ಟಿಯ ಎಲ್ಲ ನಿಯಮಗಳು ಅನ
ಸರಿಸುವುವು. ಮನುಷ್ಯನು ಸುಖಸಂಪತ್ತುಗಳಲ್ಲಿಯೇ ಇರಲಿ, ದುಃ
ವಿಪತ್ತುಗಳಲ್ಲಿಯೇ ಇರಲಿ; ಯಾವ ಯಾವ ಕಾಲಕ್ಕೆ ಏನೇನು ಆಗಬೇಕೊ

ಅವೆಲ್ಲ ಆಗಿಯೇ ತೀರಬೇಕು. ಪಾರ್ವತೀದೇವಿಯು ಶಂಕರನ ಸೇವೆಯಲ್ಲಿ ಮಗ್ನಳಾಗಿ ಸ್ವಸುಖ ಸ್ವಶರೀರಪೋಷಣೆಗಳನ್ನು ಅಲಕ್ಷಿಸಿದ್ದರೂ ಸೃಷ್ಟಿಯ ನಿಯಮಾನುಸಾರವಾಗಿ ಆಕೆಗೆ ಯೌವನವು ಪ್ರಾಪ್ತವಾಯಿತು. ಚಳಿಗಾಲವು ಹೋಗಿ ವಸಂತಕಾಲವು ಬರುತ್ತಲೇ ಗಿಡಮರಗಳು ಹೊಸ ಕಳೆಗಳಿಂದ ಕಂಗೊಳಿಸಿ ಭೂದೇವಿಯು ದಿನದಿನಕ್ಕೆ ಪ್ರಭಾಮಯಳಾಗಿ ತೋರತೊಡಗುವಂತೆ ಪಾರ್ವತೀದೇವಿಯ ಶರೀರಾವಯವಗಳು ದಿನದಿನಕ್ಕೆ ಹೊಸ ಹೊಸ ಲಾವಣ್ಯಪ್ರಭೆಗಳಿಂದ ಬೆಳಗತೊಡಗಿದುವು. ಅವು ಮದ್ಯದ ಹಾಗೆ ಉನ್ಮಾದಕರಗಳಾಗಿದ್ದರೂ ನಿರ್ಮಲವಾದ ಜಲರಾಶಿಯಲ್ಲಿಯ ನೀಲವರ್ಣದಂತೆ ನಿರಾಕಾರ ನಿರಾಧಾರವಾಗಿದ್ದುವು. ಆಕೆ ನಡೆಯುವಾಗ ಹುಟ್ಟುವ ಕಾಲೊಳಗಿನ ನೂಪುರಗಳ ಧ್ವನಿಯು ಕೋಮಲವಾದ ವೀಣಾನಾದದಂತೆ ಹೃದಯವನ್ನು ಭೇದಿಸಿ ಒಳಸೇರುವುದು. ಹೆಜ್ಜೆಹೆಜ್ಜೆಗೆ ಭೂದೇವಿಯು ಮೇಲೆದ್ದು ಸ್ವಾಗತಮಾಡುವಳೋ ಎಂಬಂತೆ ಆಕೆಯ ಆ ಕೋಮಲವಾದ ಪಾದಗಳು ತನುವಲ್ಲರಿಯನ್ನು ತೊನೆಯಿಸುತ್ತ ಭೂಮಿಗೆ ಹೊಂದಿಯೇ ಮುಂದರಿಸುವುವು. ಕೈಬೆರಳುಗಳ ಕಾಂತಿಗೆ ನಾಚಿಕೊಂಡು ಸಂಪಗೆಯ ಹೂವು ಮುದುಡಿ ಮೊಗ್ಗೆಯಾದಂತೆ ತೋರುವುದು. ಅಂತರಂಗದ ನಿಶ್ಚಲವಾದ ಮನೋಭಾವಗಳ ಪ್ರತಿಬಿಂಬವನ್ನು ಬೀರುತ್ತಿರುವ ನಿರ್ಮಲವಾದ ಮುಖಕಾಂತಿಯಿಂದ ಪ್ರೇಕ್ಷಕರ ಮನಸ್ಸಿನಲ್ಲಿ ಭಕ್ತಿಭಾವವು ಉದಯಿಸುವುದು. ಉಜ್ವಲವಾದ ಕಿಚ್ಚಿನ ನಡುವೆ ರಸರೂಪವಾಗಿ ತಳತಳಿಸುವ ಬಂಗಾರದ ಬಣ್ಣದಂತೆ ದೇದೀಪ್ಯಮಾನವಾದ ಶರೀರಕಾಂತಿಯು ನೋಡುವವರ ಕಣ್ಣುಗಳನ್ನು ಕುಕ್ಕುವುದು. ಕಾಂತಿಮಯವಾದ ಕರಿಯಕಣ್ಣುಗಳು ತಂಗಾಳಿಯಿಂದ ತೊನೆಯುವ ಸರೋವರದ ಮೇಲ್ಭಾಗದಂತೆ ಹೊಳೆಯುವುವು. ಈ ತರದ ಸ್ವಭಾವಸುಂದರಿಯಾದ ರಾಜಪುತ್ರಿಯ ಮೈಮೇಲಿನ ರತ್ನಖಚಿತವಾದ ವಸ್ತ್ರ ರತ್ನಾಲಂಕಾರಗಳು ಮುಂಜಾವಿನ ಚಂದ್ರಬಿಂಬದಂತೆ ಕಾಂತಿಗುಂದಿ ತೋರುತ್ತಿದ್ದುವು.

ಪಾರ್ವತೀದೇವಿಯು ಈ ಬಗೆಯಾಗಿ ಬಾಹ್ಯಾಂಗ ಸೌಂದರ್ಯದಿಂದ ಅದ್ವಿತೀಯಳಾಗಿ ರಾರಾಜಿಸುತ್ತಿದ್ದಂತೆಯೇ ಅಂತರಂಗದ ಸದ್ಗುಣಗಳೆಂಬ ಅಲಂಕಾರಗಳಿಂದಲೂ ಅನುಪಮಳಾಗಿ ವಿರಾಜಿಸುತ್ತಿದ್ದಳು. ಸಕಲ ವಿದ್ಯೆ

ಗಳನ್ನೂ ಸಾಂಗವಾಗಿ ಅರಿತಿದ್ದಳಾದರೂ ತಾನು ಜಾಣೆಯೆಂಬ ಅಹಂಕಾ
ರದ ಗಾಳಿಯು ಕೂಡ ಆಕೆಯನ್ನು ಸೋಂಕಿರಲಿಲ್ಲ. ತಾಯಿತಂದೆಗಳ ಸೇವಾ
ಶುಶ್ರೂಷೆಗಳನ್ನು ಪರಮಾದರದಿಂದ ತಪ್ಪದೆ ಮಾಡುವಳು. ಎಂದಾದರು
ಅದರಲ್ಲಿ ಎಳ್ಳಷ್ಟು ಕೊರತೆಯಾದರೂ ಆಕೆಗೆ ಬಹು ಕಷ್ಟವಾಗುವುದು
ತಾನು ಮಹಾಪರಾಧ ಮಾಡಿದಂತೆ ಭಾಸವಾಗುವುದು; ನಾಚಿಕೆಯಿಂ
ಆದಿನವೆಲ್ಲ ತಲೆಯೆತ್ತಿ ನಡೆಯಳು. ಈ ರೀತಿ ಅಂತರಂಗ ಬಾಹ್ಯಾಂ
ಸೌಂದರ್ಯಗಳಿಂದ ಮೆರೆಯುವ ಮಗಳಿಗೆ ಇನ್ನೂ ಇಷ್ಟದೇವತೆಯ
ಪ್ರಾಪ್ತಿಯಾಗದಿರುವುದನ್ನು ಕಂಡು ಮೇನಾದೇವಿಯೂ ಪರ್ವತರಾಜನ
ತುಂಬ ವಿಷಾದಪಡುವರು. ಆದರೂ ಅವರು ನಾರದ ಋಷಿಗಳ ವಾಕ್ಯವನ
ನೆರೆನಂಬಿ ದೇವಾಧಿದೇವನ ಭಕ್ತವಾತ್ಸಲ್ಯದಲ್ಲಿ ವಿಶ್ವಾಸವಿಟ್ಟು ಮಗಳ
ಮಾಡುವ ಶ್ರೀಶಂಕರನ ಸೇವೆಗೆ ಸಕಲ ರೀತಿಯಿಂದಲೂ ಸಹಾಯ
ಮಾಡುತ್ತ ಸಮಾಧಾನ ತಾಳುವರು.

ಭಕ್ತಪುಂಗವನಾದ ನಂದಿಯು ಪಾರ್ವತೀದೇವಿಯು ಪ್ರತಿನಿತ್ಯ ತನ
ಗೆಳತಿಯರೊಡನೆ ಶಿವಪೂಜೆಗೆ ಬರುವಾಗಲೂ ಹೋಗುವಾಗಲೂ ಅತು
ವಾದ ಭಕ್ತಿಭಾವನೆಯಿಂದ ಆಕೆಯನ್ನು ಕಣ್ಣಣಿಯೆ ನೋಡುತ್ತಿದ್ದನ
ಆತನ ಆ ನಿರ್ಮಲವಾದ ಶಾಂತಿರಸಪೂರಿತವಾದ ಅಂತರಂಗದಲ್ಲಿ ಹುಟ್ಟಿ
ಪಾರ್ವತೀದೇವಿಯ ವಿಷಯದ ಮಾತೃಸ್ನೇಹದ ಭಾವನೆ ದಿನದಿನಕ್ಕೆ ದೃ
ವಾಗುತ್ತ ನಡೆಯಿತು. ಬಹುಕಾಲದ ಹಿಂದಿನ ಕೈಲಾಸಗಿರಿಯೊಳಗಿನ ಶಿ
ಮಂದಿರದಲ್ಲಿರುವಾಗಿನ ಸತೀ ದೇವಿಯ ರೂಪ–ಗುಣ–ಪ್ರೀತಿ–ವಾತ್ಸ
ಗಳು ಒಂದೊಂದಾಗಿ ಆತನ ಕಣ್ಣ ಮುಂದೆ ಕಟ್ಟಿದಂತಾಗುವುದು. ಒಮ್ಮೊಮ್ಮೆ
ಆಕೆಯೇ ಈಕೆಯೋ ಎಂದು ಭಾಸವಾಗಿ ಅತುಲವಾದ ಮಾತೆಯ ಮ
ತೆಯು ಹೃದಯವನ್ನು ಆವರಿಸಿ ಬಿಡುವುದು. ಭಕ್ತವರನಾದ ನಂದಿಯ
ಒಂದು ದಿನ ಹೀಗೆಯೇ ವಿಚಾರ ಮಾಡುತ್ತಿರುವಾಗ ಪೂಜೋಪಕರ
ಗಳನ್ನು ಕೂಡಿಸಿಕೊಂಡು ಶಿವಪೂಜೆಗೆ ಬರುತ್ತಿರುವ ಪಾರ್ವತೀದೇವಿಯನ
ಕಂಡನು. ಒಡನೆಯೇ ಅನುಪಮವಾದೊಂದು ವಿದ್ಯುತ್ ಶಲಾಕೆ ತ
ಹೃದಯವನ್ನು ಸೇರಿದಂತೆ ಭಾಸವಾಯಿತು. ಆತನ ಹೃದಯವು ಅದ್ವಿ
ಯವಾದ ಮಾತೃ ಸ್ನೇಹ–ರಸದಿಂದ ತುಂಬಿ ತುಳುಕುವಂತೆ ತೋರಿತ

ಕುತೂಹಲಪೂರ್ಣವಾದ ಆತನ ದೃಷ್ಟಿಯು ಆನಂದಾಶ್ರುವಿನ ಪರಿಯಿಂದ ಮಲಿನವಾಯಿತು. ಆತನು ತಟ್ಟನೆ ಎದ್ದು ಪಾರ್ವತೀದೇವಿಯ ಚರಣ ಗಳಿಗೆರಗಿ "ಅಮ್ಮಾ! ಅಮ್ಮಾ!" ಎಂದು ಭಕ್ತಿಭಾವನೆಯಿಂದ ಕಂಪಿತ ವಾಗುತ್ತಿರುವ ಕಂಠದಿಂದ ಅರೆನುಡಿಯನ್ನು ನುಡಿದು ನಿಶ್ಚಲನಾಗಿ ನಿಂತು ಕೊಂಡನು. ಭಗವತಿಯು ಭಕ್ತನಿಗೆ ಮೈದೋರಿದಳು! ಆಕೆಯ ಆ ಅಪಾರ ವಾದ ಮಹಿಮೆಯಿಂದ ನಂದಿಯ ಮನಸ್ಸಿನೊಳಗಿನ ಮೋಹಪಟಲವು ದೂರಾಯಿತು. ಬಹುಕಾಲದ ಸಂಘಟನೆಗಳೆಲ್ಲ ಪುಸ್ತಕದ ಪುಟಗಳನ್ನು ತಿರುವುತ್ತ ನಡೆದಂತೆ ಒಂದರಹಿಂದೊಂದು ಸ್ಪಷ್ಟವಾಗಿ ಆತನ ಕಣ್ಣಮುಂದೆ ಕಟ್ಟಿದುವು. ಭಕ್ತ ಶ್ರೇಷ್ಠನಾದ ನಂದಿಯು ಅವನ್ನೆಲ್ಲ ತಿಳಿದವನಾಗಿ ಜಗ ದಂಬೆಯ ಪಾದಗಳಿಗೆ "**नारायणि नमस्तेऽस्तु** × ×" ಎಂದು ಸ್ತುತಿ ಮಾಡಿದನು. ಆತನ ಅಂತರಂಗವು ಅನುಪಮವಾದ ಶಾಂತಿರಸದಿಂದ ತುಂಬಿ ತುಳುಕಿತು.

ಭಕ್ತಶಿರೋಮಣಿಯಾದ ನಂದಿಯ ಈ ವಿಧದ ಅನುಪಮವಾದ ಭಕ್ತಿ ಯನ್ನು ಕಂಡು ಸಂತುಷ್ಟಳಾದ ಭಗವತಿ ಪಾರ್ವತೀದೇವಿಯು ಆತನ ಮೈಮೇಲೆ ಕೈಯಾಡಿಸಿ "ಮಗನೇ, ನಿನ್ನ ಅವಿಚಲವಾದ ಭಕ್ತಿಯನ್ನು ನೋಡಿ ತುಂಬ ಸಂತೋಷವಾಯಿತು. ನಿನ್ನ ಇಷ್ಟಾರ್ಥವೇನೆಂಬುದನ್ನು ಸಂಕೋಚವಿಲ್ಲದೆ ತಿಳಿಸಿದರೆ ಪೂರೈಸಲು ಸಿದ್ಧಳಿರುವೆನು." ಎಂದು ಆನಂದ ಅಭಿಮಾನ ವಾತ್ಸಲ್ಯಗಳೊಡನೆ ನುಡಿದಳು. ಜಗನ್ಮಾತೆಯ ಅಭಯವಚನ ವನ್ನು ಕೇಳಿ ನಂದಿಯು "ತಾಯೀ, ಭಗವತೀ, ನಿನ್ನ ಅನುಗ್ರಹವೊಂದೇ ನನ್ನ ಇಷ್ಟಾರ್ಥವು. ಅದೇ ದೊರೆದ ಮೇಲೆ ನನಗೆ ಇನ್ಯಾವ ಕೊರತೆಗಳಿ ರುವುವು? ಅಮ್ಮಾ, ನಿನ್ನ ಚಿರಕಾಲದ ಸಹವಾಸದಿಂದ ನೀನು ಹೇಳು ವಂತೆ ನನ್ನಲ್ಲಿ ಕೆಲವು ಸದ್ಗುಣಗಳು ಸೇರಿದ್ದರೂ ಸೇರಿರಬಹುದು. ಆದರೆ ಮನಸ್ಸಿನ ಸ್ಥಿರವಾದ ಶಾಂತಿಯೊಂದು ಮಾತ್ರ ನನಗೆ ಇನ್ನೂ ಲಭಿಸಿದಂತೆ ತೋರುವುದಿಲ್ಲ. ನನ್ನ ಮನಸ್ಸಿನ ವಿರುದ್ಧವಾದ ಕಾರ್ಯಗಳೇನಾದರೂ ನಡೆದರೆ ದುಃಖಸಂತಾಪಾದಿಗಳು ಬೇಡ ಬೇಡವೆಂದರೂ ತಲೆದೋರುವುವು. ಇಚ್ಛಿತ ಕಾರ್ಯಲಾಭದಿಂದ ಮನಸ್ಸು ಹುರಿದುಂಬುವದು. ಇದು ಸ್ಥಿರ ವಾದ ಶಾಂತಿಯ ಲಕ್ಷಣವಲ್ಲವೆಂದು ನನಗೆ ಭಾಸವಾಗುವುದು. ಆದುದ

ರಿಂದ ಸ್ಥಿರವಾದ ಮನಃಶಾಂತಿಯ ರಹಸ್ಯವನ್ನೂ ಅದನ್ನು ಹೇಗೆ ಪಡೆ
ಬೇಕೆಂಬುದನ್ನೂ ದಯವಿಟ್ಟು ಉಪದೇಶಿಸುವೆಯಾದರೆ ನಾನಿಂದು ಧನ್ಯನಾ
ಗುವೆನು. " ಎಂದು ಬಿನ್ನವಿಸಿದನು.

**ಭಗವತಿ:**—ಮಗನೇ, ನೀನೆಂದ ಮಾತಿನ ಭಾವವು ತಿಳಿಯಿತ
ಇಚ್ಛಾ ವಿರುದ್ಧವಾದ ಕಾರ್ಯಗಳು ಜರುಗುವುವೆಂದು ಹೇಳುವೆಯಾದು
ರಿಂದ ನೀನು ಪ್ರಾಪಂಚಿಕನಾದವನ ವಿಚಾರವನ್ನು ಕೇಳುವೆಯೆಂದ ಹಾಗ
ಯಿತು. ಪ್ರಪಂಚದೊಳಗಿನ ವ್ಯಕ್ತಿಯ ವಿಷಯವಾಗಿ ಮಾತಾಡುವಾ
ಒಂದು ಗೂಢವಿಚಾರವನ್ನು ಯಾವಾಗಲೂ ಲಕ್ಷ್ಯದಲ್ಲಿಟ್ಟಿರಬೇಕು. ಪಂ
ರದ ಗಿಳಿಯೆಂದರೆ, ಬರೇ ಪಂಜರವೂ ಅಲ್ಲ, ಗಿಳಿಯೂ ಅಲ್ಲ, ಪಂಜರದಲ್ಲಿ ಸ
ಬಿದ್ದ ಗಿಳಿಯೆಂದು ಅರ್ಥವು. ಬಹುಗುಣಗಳಿಂದ ಕೂಡಿದ, ಬಹುರೂಪ
ಬಹು ಉದ್ದೇಶಗಳಿಂದ ಕಾರ್ಯಾಸಕ್ತರಾದ ಜನರಿಂದ ತುಂಬಿದ ಜನಸಮ
ದಾಯವು ಪ್ರಪಂಚವು. ಅಂತಹ ಪ್ರಪಂಚದಲ್ಲಿ ಸೇರಿಕೊಂಡವನು ಸ್ಥಿ
ವಾದ ಮನಃಶಾಂತಿಯನ್ನು ಹೇಗೆ ಪಡೆಯಬೇಕೆಂಬುದೇ ನಿನ್ನ ಪ್ರಶ್ನೆ.

**ನಂದಿ:**—ಹೌದು, ತಾಯೀ, ಇದೇ ನನ್ನ ಪ್ರಶ್ನೆ:

**ಭಗವತಿ:**—ವತ್ಸಾ, ಪ್ರಪಂಚವೆಂಬ ಶಬ್ದವು ಬಹು ವ್ಯಾಪಕಾರ್ಥ
ವುಳ್ಳದು. ಬಾವಿಯೊಳಗಿನ ಕಪ್ಪೆಗಳಂತೆ ಸಂಕುಚಿತ ವಿಚಾರವುಳ್ಳ ವಿಷ
ಲಂಪಟ ವ್ಯಕ್ತಿಗಳ ಮತ್ತು ಉದಾತ್ತವಿಚಾರಗಳಿಂದ ಕೂಡಿದ ವ್ಯಕ್ತಿಗ
ಪ್ರಪಂಚಗಳು ಭಿನ್ನ ಭಿನ್ನವಾಗಿರುವುವು. ಮೊದಲನೆಯ ವರ್ಗದವ
ಪ್ರಪಂಚಭಾವನೆಯು ಹೆಂಡಿರು ಮಕ್ಕಳು ಆಪ್ತೇಷ್ಟರು ಇವರನ್ನ
ಮಿಕ್ಕಿರುವುದಿಲ್ಲ; ಬೇರೆ ಬೇರೆ ಮಕ್ಕಳ ಮೇಲಿನ ಮಮತೆಯು ಕೂ
ಬೇರೆ ಬೇರೆ. ಅವರು ಇಷ್ಟು ಕ್ಷುದ್ರವಿಚಾರದವರು. ಇನ್ನು ಉದಾ
ವಿಚಾರಗಳಿಂದ ಪ್ರೇರಿತರಾದ ಸಜ್ಜನರಿಗೂ ಒಮ್ಮೊಮ್ಮೆ ಮನಃಶಾಂ
ಯನ್ನು ಕಳೆದುಕೊಳ್ಳುವ ಸಂದರ್ಭವು ಬರುವುದು. ಈ ಎಲ್ಲ ಸಂದರ್ಭ
ಗಳಲ್ಲಿಯೂ ಒಂದು ಸಾಮಾನ್ಯವಾದ ರಹಸ್ಯವನ್ನು ಲಕ್ಷ್ಯದಲ್ಲಿಟ್ಟು ನಡೆ
ತೊಡಗಿದರೆ ಮನಸ್ಸಿನ ಸ್ಥಿರವಾದಶಾಂತಿಯು ತಾನಾಗಿ ಲಭಿಸುವುದ
ಪ್ರಾಪಂಚಿಕ ವ್ಯಕ್ತಿಗಳು ಸಾಮಾನ್ಯವಾಗಿ '**ತನಗಾಗಿ ಪ್ರಪಂಚವಿ
ವುದು**' ಎಂದು ಭಾವಿಸಿ ನಡೆಯುವರು. ನಾನು ಮದುವೆಯಾದ ಹೆಂಡ

ಅವಳು ನನಗೆ ಅನುರೂಪಳಾಗಿರಬೇಕು; ಅನುಕೂಲೆಯಾಗಿರಬೇಕು. ನಾನು ಇಟ್ಟುಕೊಂಡ ಸೇವಕನು, ಅವನು ನನಗೆ ವಿಧೇಯನಾಗಿರಬೇಕು; ನನ್ನ ಸೇವೆಯನ್ನು ಮಾಡಲು ಸಮರ್ಥನಾಗಿರಬೇಕು. ಇತ್ಯಾದಿ, ಇತ್ಯಾದಿ. ಈ ಎಲ್ಲ ಸಂದರ್ಭಗಳಲ್ಲಿ ಪ್ರಾಪಂಚಿಕ ವ್ಯಕ್ತಿಗಳು ಮೂಲವನ್ನೇ ಮರೆಯುವರು. ನಾನು ಯಾರೆಂಬುದು ಅವರಿಗೆ ತಿಳಿಯುವುದೇ ಇಲ್ಲ. ಇಲ್ಲಿ ನಾನು ಯಾರೆಂದರೆ (**आत्मा च परमात्मा च पर्यायो नात्र भेदधीः** ಎಂಬ ಆಧ್ಯಾತ್ಮಿಕ ಭಾವನೆಯಲ್ಲ. ಅದನ್ನು ತಿಳಿದವರು ಬೇರೊಂದು ವರ್ಗಕ್ಕೆ ಸೇರುವರು.) ಒಬ್ಬ ಪ್ರಾಪಂಚಿಕ ವ್ಯಕ್ತಿಯು ತನ್ನ ಪತ್ನಿಯು ತನಗೆ ಅನುರೂಪಳಾಗಿರಬೇಕು, ಅನುಕೂಲೆಯಾಗಿರಬೇಕು, ಎಂದು ತಾನು ಬಯಸುವಂತೆ ಅವಳು ಕೂಡ (ಪತ್ನಿ) ತನ್ನ ಪತಿಯು ತನಗೆ ಅನುರೂಪನಾಗಿರಬೇಕು, ಅನುಕೂಲನಾಗಿರಬೇಕು ಎಂದು ಬಯಸುವಳೆಂಬುದನ್ನು ಆತನು ಮರೆತುಬಿಡುವನು. ತಾನು ಸರ್ವಜ್ಞನೂ ಸರ್ವಗುಣಸಂಪನ್ನನೂ ಇರುವೆನೆಂದು ಮೊದಲೇ ಸಿದ್ಧಾಂತಮಾಡಿಕೊಂಡು ತರುವಾಯ ತನ್ನ ಪರಿವಾರದವರ ದೋಷಗಳನ್ನು ಎಣಿಸುವನು. ಇದೀಗ ದೋಷದ ಗುಟ್ಟು! ಸೆರೆಗುಡುಕನ ಪತ್ನಿಯು ತನಗೆ ಸೆರೆಯು ಸೇರುವುದಿಲ್ಲ ವೆಂದು ನುಡಿದರೆ ಅವಳು ಅವನಿಗೆ ಅನುರೂಪಳಲ್ಲವೆಂದು ಭಾವಿಸುವುದು ನ್ಯಾಯ್ಯವಾಗುವುದೋ? ಆದುದರಿಂದ ಪರರಲ್ಲಿ ದೋಷಾರೋಪಣೆ ಮಾಡಿ ಮನಃಶಾಂತಿಯನ್ನು ಕಳೆದುಕೊಳ್ಳುವವನು ಮೊದಲು ತನ್ನನ್ನು ತಿದ್ದಿಕೊಳ್ಳಬೇಕು. ಇಂತಹ ಎಲ್ಲ ಸಂದರ್ಭಗಳಲ್ಲಿ ಮನುಷ್ಯನು **ತನಗಾಗಿ ಪ್ರಪಂಚವಿರುವುದು** ಎಂದು ಭಾವಿಸಿ ನಡೆಯದೆ **ಪ್ರಪಂಚಕ್ಕಾಗಿ ತಾನು ಇರುವೆನು** ಎಂದು ಭಾವಿಸಿ ನಡೆದರೆ ಮನಃಶಾಂತಿಗೆ ಭಂಗವನ್ನು ತರುವಂತಹ ಸಂದರ್ಭಗಳು ಎಂದೂ ಬರಲಾರವು. ಸುವಿಚಾರಿಯೂ ಸದ್ಗುಣಿಯೂ ಆದವನು ದುರ್ವಿಚಾರ ದುರಾಚಾರಗಳಿಂದ ತುಂಬಿದ ಪ್ರಾಪಂಚಿಕ ವ್ಯಕ್ತಿ (ಹೆಂಡಿರುಮಕ್ಕಳು) ಗಳೊಡನೆ ಪ್ರಪಂಚ ಮಾಡುವ ಸಂದರ್ಭವು ಬಂದರೆ ಇಂಥವರ ದುರ್ಗುಣಗಳನ್ನು ನೀಗುವುದಕ್ಕಾಗಿಯೇ ತಾನಿರುವೆನೆಂದು ಅವನು ಭಾವಿಸಬೇಕು. ಮತ್ತು ಶ್ರೀಶಂಕರನು ಅನ್ಯರಿಂದ ಇಂತಹ ದುರ್ಘಟಕಾರ್ಯಗಳು ನೀಗಲಾರವೆಂಬ ಭಾವನೆಯಿಂದಲೇ ಬೇಕೆಂದು ತನ್ನನ್ನು ಇಂತಹ ದುರ್ಜನರ ಸಂಘದ ಚಾಲಕನನ್ನಾಗಿ ನಿಯಮಿಸಿರುವ

ನೆಂದು ತಿಳಿದುಕೊಂಡು ಶಾಂತನಾಗಬೇಕು. ಮತ್ತು ಅವರಿಂದಾಗು
ಅಪರಾಧಗಳನ್ನು ನೋಡಿದ ಕೂಡಲೆ ಅವರು ಅಪರಾಧಕ್ಕೆ ಕರ್ತರೇ ಎಂ
ತಾನು ಅದನ್ನು ತಿದ್ದಲಿಕ್ಕೆ ಬಾಧ್ಯನೇ ಎಂದೂ ಭಾವಿಸಿಕೊಳ್ಳಬೇಕು. ಇ
ಮಾತು ಉದಾತ್ತ ವಿಚಾರಗಳಿಂದ ಕೂಡಿದ ಸಮಾಜ ನಾಯಕರಿಗೂ ಅ
ಕಾರಿಗಳಿಗೂ ರಾಜರಿಗೂ ಸಲ್ಲುವುದು.

ಭಗವತಿಯ ಉಪದೇಶವಾಕ್ಯಗಳನ್ನು ನಿಶ್ಚಲಚಿತ್ತದಿಂದ ಕೇಳುತ್ತಲಿ
ನಂದಿಯು ನಡುವೆಯೇ:—"ಅಮ್ಮಾ, ತಿಳಿಯಿತು. ನೀನು ಹೇಳ
ವಿಚಾರಗಳು ತಿಳಿದುವು. ಆದರೆ ನಾವು ಹುಟ್ಟಿದಂದಿನಿಂದ ಸಾಯುವವರೆಗೆ
ಅನೇಕ ವಿಧವಾದ ಕರ್ತವ್ಯಗಳನ್ನು ಮಾಡಬೇಕಾಗುವುದು. ಅವುಗಳ
ಕೆಲವು ನಮ್ಮ ಶಕ್ತಿಯ ನ್ಯೂನತೆಯಿಂದ ಕೊನೆಮುಟ್ಟುವುದಿಲ್ಲ. ಕೆಲ
ನಮ್ಮ ಅಜ್ಞಾನಮೂಲಕವಾದ ತಪ್ಪುಕಲ್ಪನೆಗಳೇ ಆಧಾರವಾಗಿರುವುದರಿ
ಕೊನೆಗಾಣುವುದಿಲ್ಲ. ಏಕಿದರೆ ಎಲ್ಲಿ ಅಸ್ಥಿರ ಸಂಬಂಧವಿರುವುದಿಲ್ಲವೆ
ಅಂಥಲ್ಲಿಯೂ ಕೂಡ ನಾವು ನಿರಾಶರಾಗಿ ಮನಃಶಾಂತಿಯನ್ನು ಕಳೆದುಕೊ
ಳ್ಳುವ ಸಂದರ್ಭವು ಬಂದೇ ಬರುವುದು. ಇಂಥಲ್ಲಿ ನಾವು ಯಾವ ಮಾ
ವನ್ನು ಅವಲಂಬಿಸಬೇಕೆಂಬುದನ್ನಷ್ಟು ಹೇಳಿದರೆ ನಾನು ಧನ್ಯನಾಗುವೆನು
ಎಂದು ವಿನಯದಿಂದ ವಿಜ್ಞಾಪಿಸಿದನು.

**ಭಗವತಿ:**—ಕಂದಾ, ನಿನ್ನ ಪ್ರಶ್ನೆ ತಿಳಿಯಿತು. ಈ ಲೋಕದ
ಜನ್ಮವೆತ್ತಿದ ವ್ಯಕ್ತಿಯು ಶಕ್ತಿಸಂಪನ್ನನೂ ಜ್ಞಾನಸಂಪನ್ನನೂ ಆಗಿರು
ನೆಂದು ಭಾವಿಸಿಕೊಳ್ಳುವುದು ಮೊದಲನೆಯ ತಪ್ಪು. ಶಕ್ತಿಯೂ ಜ್ಞಾನ
ಅನಂತವಾಗಿರುವುವು. ವಿದ್ಯಾಬುದ್ಧಿಗಳು ಅಗಣಿತವಾಗಿರುವುವು. ಲೋ
ದಲ್ಲಿಯ ವಿದ್ಯಾಬುದ್ಧಿಗಳನ್ನು ಸಂಗ್ರಹಿಸಿ ಕೊನೆಮುಟ್ಟುವೆನೆಂದು ಭಾವಿ
ಕೊಳ್ಳುವುದೆಂದರೆ ಮಹಾಸಾಗರದ ದಂಡೆಯಲ್ಲಿರುವ ಮಳಲ ರಾಶಿಯೊಳ
ಕಣಗಳನ್ನೆಲ್ಲ ಎಣಿಸಿ ಕೊನೆಗಾಣಿಸುವೆನೆಂದು ಭಾವಿಸಿಕೊಳ್ಳುವಂತೆಯೆ
ಸರಿ. ಅದರಂತೆ ಮಾನವೀಶಕ್ತಿಗೆ ಸಾಧ್ಯವಿರುವಷ್ಟು ವಿದ್ಯಾಬುದ್ಧಿಗಳ
ಕೂಡ ಇಷ್ಟೇ ಎಂದು ನಿರ್ಣಯಿಸುವಂತಿಲ್ಲ. ಈ ಲೌಕಿಕ ವಿದ್ಯಾಬುದ್ಧಿ
ಇಷ್ಟೇ ಅಲ್ಲದೆ ಮಾನವನ ನಿಜವಾದ ಉತ್ಕರ್ಷಕ್ಕೆ ಕಾರಣವಾದ ಕೆಲ
ಸಂಗತಿಗಳಿರುವುವು. ಲೌಕಿಕಜ್ಞಾನಸಂಪಾದನೆಯಿಂದ ಮನುಷ್ಯ

ಹಂಕಾರವು ಉತ್ಪನ್ನವಾಗುವುದು. ಪ್ರಾಪಂಚಿಕ ವಿದ್ಯಾಬುದ್ಧಿಗಳ ಸಂಗ್ರಹದಿಂದ ಮನಸ್ಸಿನ ಶಕ್ತಿಯು ಕುಂದಿ ಇಂದ್ರಿಯಗಳ ಶಕ್ತಿಯೂ ಅವುಗಳ ಸುಖಲಾಲಸೆಯೂ ಬೆಳೆಯಲಿಕ್ಕೆ ಮಾತ್ರ ಸಹಾಯವಾಗುವದು. ಅಂದರೆ ಲೌಕಿಕ ವಿದ್ಯಾಬುದ್ಧಿಗಳೂ ಆ ವಿದ್ಯಾಬುದ್ಧಿಗಳ ಸಹಾಯದಿಂದ ಕೊನೆಗಾಣಿಸಲು ಶಕ್ಯವಿರುವ ಕಾರ್ಯಗಳೂ ಲೋಕದಲ್ಲಿ ಜನ್ಮವೆತ್ತಿದ ವ್ಯಕ್ತಿಗಳ ನಿಜವಾದ ಧ್ಯೇಯಗಳಲ್ಲ. ಅವುಗಳ ಸಾಧನೆಯಿಂದ ಹಿಗ್ಗಲೂ ಕಾರಣವಿಲ್ಲ. ಸಾಧ್ಯವಾಗದಿರಲು ತಗ್ಗಲೂ ಕಾರಣವಿಲ್ಲ. ಯಾವ ಜ್ಞಾನದ ಸಹಾಯದಿಂದ ಆತ್ಮಾಭಿಮಾನರೂಪವಾದ ಅಂಧಕಾರವು ಹರಿದು ವಿಶ್ವಪ್ರೇಮವೆಂಬ ದೇದೀಪ್ಯಮಾನವಾದ ಶಕ್ತಿಯು ಉತ್ಪನ್ನವಾಗುವುದೋ ಅದೇ ನಿಜವಾದ ಜ್ಞಾನವು. ಆ ಜ್ಞಾನವು ಯಾವನಿಗೆ ಸಾಧಿಸುವುದೋ ಅವನೆಂದೂ ಮನಃಶಾಂತಿಯನ್ನು ಕಳೆದುಕೊಳ್ಳುವ ಸಂಭವವೇ ಇಲ್ಲ. ಹಾಗೆ ಆತ್ಮಜ್ಞಾನವನ್ನು ಪಡೆಯಲು ಸಾಧ್ಯವಿಲ್ಲದವರು ಕೂಡ ತಾವು ಸದಾ ಸರ್ವದಾ ಮುಳುಗೇಳುತ್ತಿರುವ ಈ ಪ್ರಪಂಚದಲ್ಲಿ ಈ ಕೇವಲ ಪ್ರಾಪಂಚಿಕ ವಿದ್ಯಾಬುದ್ಧಿಗಳನ್ನೂ ತನ್ಮೂಲಕವಾದ ಧನಾರ್ಜನಾದಿ ಇಂದ್ರಿಯಗಳ ತೃಪ್ತಿಯ ಸಾಧನಗಳನ್ನೂ ದೊರಕಿಸುವುದು ತಮ್ಮ ನಿಜವಾದ ಧ್ಯೇಯಗಳಾಗಿರದೆ ತಮ್ಮ ಅಂತಃಶಕ್ತಿಯನ್ನು ಬೆಳೆಯಿಸುವಂತಹ ಆತ್ಮಜ್ಞಾನಕ್ಕೆ ಕಾರಣವಾದ ಬೇರೊಂದು ಜ್ಞಾನಮಾರ್ಗವು ಇರುವುದೆಂದೂ ಅದೇ ಮಾನವ ಪ್ರಾಣಿಯ ನಿಜವಾದ ಅವಶ್ಯ ಸಾಧನೀಯವಾದ ಧ್ಯೇಯವೆಂದೂ ನಂಬಿನಡೆಯುತ್ತಿದ್ದರೆ ಈ ಅನಿತ್ಯವಾದ ಪ್ರಾಪಂಚಿಕ ಕಾರ್ಯಗಳ ಸಾಧ್ಯಾಸಾಧ್ಯತೆಗಳಿಂದ ಮನಃಶಾಂತಿಗೆ ಎಷ್ಟು ಮಾತ್ರವೂ ಭಂಗವು ಬರದು. ವತ್ಸಾ, ವಿಷಯವು ಗಹನವಾದುದು. ಮತ್ತೊಮ್ಮೆ ವಿವರವಾಗಿ ತಿಳಿಸುವೆನು. ನಿತ್ಯ ಕರ್ಮಗಳಿಗೆ ತಡವಾಗುವುದು. ಸಕಲೇಷ್ಟಾರ್ಥದಾಯಕನಾದ ಶಂಕರನು ನಿನ್ನನ್ನು ಕರುಣಿಸಲಿ.

ಭಕ್ತಪುಂಗವನಾದ ನಂದಿಯು ಪುನಃ ಪಾರ್ವತೀದೇವಿಯ ಪಾದಗಳಿಗೆರಗಿದನು. ದೇವಿಯು ಪುನಃ ಆತನನ್ನು ಆಶೀರ್ವದಿಸಿ ಶಿವಪೂಜೆಗಾಗಿ ಒಳಗೆ ಹೋದಳು.



## ಐದನೆಯ ಪರಿಚ್ಛೇದ.

# ಮದನ ಪ್ರಭಾವ



ಈ ಬಗೆಯಾಗಿ ಪಾರ್ವತೀದೇವಿಯು ಸುವಿಚಾರಪೂರ್ವ ವಾಗಿ ತುಂಬ ಶಾಂತಿಯಿಂದ ಶಂಕರನ ಸೇವೆಯಲ್ಲಿ ನಿರತಳಾ ಗಿರಲು ಅತ್ತ ದೇವಲೋಕದಲ್ಲಿ ಮಹಾ ದುಃಖಕೋಲಾಹಲವೆದ್ದಿತು. ದೇವ ಗಳೆಲ್ಲರೂ ನಿದ್ರಿತರಾಗಿರುವರೋ ಅವರೆಲ್ಲಿ ಅಡಿಗಿಕುಳಿತಿರುವರೋ ತಿಳಿಯದು. ಅವರ ಆನಂದ ಕೋಲಾಹಲವಿಲ್ಲ, ಗಂಧರ್ವರ ಗಾಯನವಿಲ್ಲ, ಕಿನ್ನರರ ವಾದ್ಯ ವಿಲ್ಲ, ಅಪ್ಸರೆಯರ ನರ್ತನವಿಲ್ಲ. ಅವರೆಲ್ಲರೂ ಮಹಾ ದುಃಖದಿಂದ ಪೀಡಿ ರಾಗಿ ಕಳವಳಗೊಂಡು ಮನೆಮನೆಗಳಲ್ಲಿ ಮೂಲೆಹಿಡಿದು ಕುಳಿತಿದ್ದರು. ಚಿಕ್ಕ ಬಾಲಕರು ಕೂಡ ಗಟ್ಟಿಯಾಗಿ ಅಳಲಾರರು. ಅಳುವ ಮಗುವನ್ನು ಕಂಡ ತಾಯಂದಿರು "ತಾರಕಾಸುರನು ಬಂದನು!" ಎಂದು ಬೆದರಿಸಿದೊಡನೆಯೆ ಮಗುವು ಅಳುವನ್ನು ನಿಲ್ಲಿಸುವುದು! ಆಬಾಲವೃದ್ಧರೆಲ್ಲರಿಗೂ ತಾರಕಾಸು ನೆಂದರೆ ಅಷ್ಟು ಭೀತಿ. ಕೊನೆಗೆ ದೇವತೆಗಳೆಲ್ಲರೂ ಸಭೆಗೂಡಿಸಿ ತಮ್ಮ ನಾಯಕನಾದ ಇಂದ್ರನೊಡನೆ ಆಪ್ತಾಲೋಚನೆ ಮಾಡಿಕೊಂಡು ಪ್ರಜಾಪ ಬ್ರಹ್ಮನ ಮೊರೆಹೊಗಬೇಕೆಂದು ನಿಶ್ಚಯಿಸಿ ಎಲ್ಲರೂ ಬ್ರಹ್ಮಲೋಕಕ್ಕೆ ಹೊ ಟರು. ಬ್ರಹ್ಮನ ಬಳಿಗೆ ಹೋಗಿ ತಾರಕಾಸುರನಿಂದ ತಮಗಾಗಿರುವ ಪೀ ಯನ್ನು ಬಹುಪರಿಯಿಂದ ವರ್ಣಿಸಿ ಇನ್ನೇನು ಗತಿಯೆಂದು ಮೊರೆಯಿಟ್ಟರು ಪ್ರಜಾಪತಿ ಬ್ರಹ್ಮನು:—"ದುಷ್ಟ ತಾರಕಾಸುರನು ಅತಿ ಪ್ರಬಲನಾಗಿ ದೇ ಲೋಕಕ್ಕೆ ಕಂಟಕವಾಗಿರುವುದು ಸತ್ಯವೇ ಸರಿ. ಇನ್ನೂ ಕೆಲವು ದಿವ ನೀವು ಈ ಕಷ್ಟವನ್ನು ಸಹಿಸಬೇಕಾಗಿದೆ. ಮುಂದೆ ಸ್ವಲ್ಪ ದಿವಸಗಳಲ್ಲಿಯೆ ಸೃಷ್ಟಿಯ ಸಂಹಾರಕರ್ತನಾದ ಶ್ರೀಶಂಕರನ ತೇಜಸ್ಸಿನಿಂದ ಪಾರ್ವತೀದೇ ಯಲ್ಲಿ ಒಬ್ಬ ಪ್ರಬಲನಾದ ಸೇನಾಪತಿಯು ಹುಟ್ಟುವನು. ಆತನಿಂದ ನಿಮ

ಃಖನಿವಾರಣೆಯಾಗುವುದು. ಅಲ್ಲಿಯವರೆಗೆ ನೀವು ಎಷ್ಟು ಪ್ರಯತ್ನ ಮಾಡಿದರೂ ವ್ಯರ್ಥವೇ ಸರಿ.'' ಎಂದು ದೇವತೆಗಳನ್ನು ಸಮಾಧಾನ ಪಡಿಸಿ ರುಗಿ ಕಳುಹಿದನು.

ಬ್ರಹ್ಮದೇವನ ಹಿತೋಕ್ತಿಯನ್ನು ಕೇಳಿಕೊಂಡು ದೇವತೆಗಳೆಲ್ಲರೂ ರುಗಿ ದೇವಲೋಕಕ್ಕೆ ಬಂದರು. ಸಂಕಟದಲ್ಲಿ ಬಿದ್ದವರಿಗೆ ಹಗಲಿರುಳು ಂಕಟನಿವಾರಣೆಯದೊಂದೇ ಚಿಂತೆ. ಅದರಲ್ಲಿಯೂ ಒಂದು ನಿವಾರಣೋಪಾ ಯವು ಸೂಚಿತವಾದ ಬಳಿಕ ಎಂದು ಆ ಉಪಾಯವನ್ನು ಕೊನೆಗಾಣಿಸು ವೋ ಎಂದು ಸಂಕಟದೊಳಗಿಂದ ಮುಕ್ತರಾಗುವೆವೋ ಎಂದು ಅವರು ಾತೊರೆಯುವುದು ತೀರ ಸಹಜವಾದ ಮಾತು. ಅದರಂತೆ ದೇವತೆಗಳೆ ರೂ ಶಂಕರನ ಸಮಾಧಿಭಂಗವಾಗಿ, ಆತನು ಪಾರ್ವತೀದೇವಿಯನ್ನು ದುವೆಯಾಗಿ, ಅವರಿಂದ ಪುತ್ರೋತ್ಪತ್ತಿಯಾಗಿ, ಆ ಪುತ್ರನಿಂದ ತಮ್ಮ ಂಕಟನಿವಾರಣೆಯಾಗುವುದೆಂಬ ಅನೇಕ ವ್ಯಕ್ತಿಗಳ ಮತ್ತು ಯುಕ್ತಿಗಳ ಂಬಂಧವಿರುವ ತಮ್ಮ ಸಂಕಟನಿವಾರಣೋಪಾಯದ ಬಗ್ಗೆ ತುಂಬ ಚಿಂತೆಗೆ ಳಗಾಗಿದ್ದರು. ದೇವಲೋಕಕ್ಕೆ ತಿರುಗಿ ಬಂದ ಬಳಿಕ ಇಂದ್ರಾದಿ ದೇವತೆ ಳೆಲ್ಲರೂ ಸೇರಿ ಒಂದು ಸಭೆಯನ್ನು ಕೂಡಿಸಿ ಶಂಕರನ ಸಮಾಧಿಭಂಗಕ್ಕೆ ನು ಉಪಾಯವನ್ನು ಹೂಡಬೇಕೆಂಬ ವಿಷಯವಾಗಿ ಅನೇಕ ಯುಕ್ತಿ ಪ್ರಯುಕ್ತಿಗಳನ್ನು ಆರಿಸಿ ನೋಡಿದರು. ಆದರೆ ಒಬ್ಬರಿಗೆ ಸರಿದೋರಿದ ಮಾತು ಮತ್ತೊಬ್ಬರಿಗೆ ಸಮ್ಮತವೆನಿಸದೆ ಯಾವುದೂ ನಿರ್ಣಯವಾಗಲಿಲ್ಲ. ಟ್ಟ ಕಡೆಗೆ ಈ ಕಾರ್ಯಕ್ಕೆ ಮದನದೇವನೇ ಸಮರ್ಥನೆಂದೂ ಆತನ ಸಹಾ ಯದಿಂದ ತಾವು ಕೃತಾರ್ಥರಾಗುವೆವೆಂದೂ ಸರ್ವಾನುಮತದಿಂದ ನಿರ್ಣಯಿ ಸರು. ಸಭಾಪತಿ ಇಂದ್ರನ ಅಪ್ಪಣೆಯ ಮೇರೆಗೆ ಮದನದೇವನನ್ನು ಕರೆ ರಲು ಸೇವಕನನ್ನು ಕಳುಹಿದರು.

ಇಂದ್ರನು ಕರೆದಿರುವನೆಂದ ಕೂಡಲೆ ಅದೇನೊ ಒಂದು ಮಹತ್ಕಾ ರ್ಯವೇ ಇರಬೇಕೆಂದು ಬಗೆದು ಮದನದೇವನು ತನ್ನ ಪ್ರಿಯಮಿತ್ರ ವಸಂತ ನನ್ನೂ ಸಂಗಡಲೇ ಕರೆದುಕೊಂಡು ದೇವಸಭೆಗೆ ಬಂದನು.

ವಸಂತರಾಜನೂ ಮದನದೇವನೂ ಒಂದಾಗಿ ಬಂದುದನ್ನು ನೋಡಿ ದೇವತೆಗಳು ತುಂಬ ಆನಂದಪಟ್ಟರು. ಸಭಾಪತಿ ಇಂದ್ರನು ತಾನೇ

ಸಿಂಹಾಸನದಿಂದಿಳಿದು ಇದಿರು ಬಂದು ಕರೆದೊಯ್ದು ಮದನದೇವನನ
ಆತನ ಮಿತ್ರನನ್ನೂ ತನ್ನ ಸಿಂಹಾಸನದ ಬಲಭಾಗದಲ್ಲಿ ಕುಳ್ಳಿರಿಸಿಕೊಂಡ
ಇಂದ್ರನ ಈ ಪರಿಯ ಆದರೋಪಚಾರಗಳನ್ನು ಕಂಡು ಮದನದೇವನ ಮ
ಸ್ಸಿನ ಅಹಂಕಾರವು ಇಮ್ಮಡಿಸಿತು. ದೇವಸಭೆಯಲ್ಲಿ ತನಗೆ ಅತ್ಯು
ಸ್ಥಾನವು ದೊರೆದುದನ್ನು ನೋಡಿ ಮದನದೇವನು ಅಹಂಕಾರದಿಂದ ಆ
ಇಂದ್ರನನ್ನು ಕುರಿತು "ಪ್ರಭುಗಳೇ, ತಮ್ಮ ಅಪ್ಪಣೆಯಾಗಿರುವುದೆ
ಕೇಳಿದೊಡನೆಯೇ ಕೈಯೊಳಗಿನ ಕೆಲಸವನ್ನೆಲ್ಲ ಬದಿಗಿಟ್ಟು ಬಂದಿರುವೆ
ಯಾವ ಪಾಮರನು ತಮ್ಮ ಮನಸ್ಸಿನ ವಿರುದ್ಧವಾಗಿ ನಡೆಯುವನೋ ತಿ
ಬೇಕು. ಇಂದ್ರಪದವನ್ನು ಬಯಸಿ ಯಾವನಾದರೂ ತಪಸ್ಸನ್ನಾಚರಿ
ತ್ತಿದ್ದರೆ ಈ ನನ್ನ ಪೂಬಾಣಗಳಿಂದ ಅವನ ಎದೆಯನ್ನು ಸೀಳಿ ಕಣ್ಗೆಡಿಸುವೆ
ಇನ್ನಾವನಾದರೂ ವಿವೇಕಿಯೂ ಜಿತೇಂದ್ರಿಯನೂ ಎಂಬ ಅಹಂಕಾರದ
ತಮ್ಮೊಡನೆ ಪಣವನ್ನು ತೊಟ್ಟು ತಮ್ಮ ಅಭಿಮಾನಕ್ಕೆ ಕುಂದು ತ
ಬಯಸಿದ್ದರೆ ಮೂರೇ ನಿಮಿಷಗಳಲ್ಲಿ ಅವನ ವಿವೇಕಬುದ್ಧಿಯನ್ನು ಕೆ
ಜಿತೇಂದ್ರಿಯತ್ವವನ್ನು ಮಣ್ಣುಗೂಡಿಸುವೆನು. ನನ್ನ ಈ ಕುಸುಮಶ
ಮಹಿಮೆ ಅಗಾಧವಾಗಿದೆ. ಇವು ಜ್ಞಾನಿಗಳನ್ನು ಮೂಢರನ್ನಾಗಿ ಮಾ
ವುವು. ಅರಸರನ್ನೂ ಹಗಲಿರುಳೆನ್ನದೆ ಅರಸಹಚ್ಚುವುವು. ವಿವೇಕಿಗಳ
ಅರಸಿಕರಲ್ಲಿ ಸರಸತೆಯನ್ನುಂಟುಮಾಡುವುವು. ನನ್ನ ಒಂದೇ ಒ
ಪೂಬಾಣದ ಹೊಡೆತದಿಂದ ಧನವಂತನೂ ಮಾನವಂತನೂ ಅಧಿಕಾರಸ
ನ್ನನೂ ಆದ ಮಹಾತ್ಮನು ಕೂಡ ಧನಮಾನ ಅಧಿಕಾರಗಳನ್ನೆಲ್ಲ ಮ
ಒಬ್ಬ ಕ್ಷುಲ್ಲಕ ರಮಣಿಯ ಕಾಲುಬಿದ್ದು ತನ್ನ ಇಷ್ಟವನ್ನು ಪೂರೈಸಿ
ಬೇಡಿಕೊಳ್ಳುವಷ್ಟು ನಿರ್ಲಜ್ಜನೂ ಕ್ಷುದ್ರನೂ ಆಗಿಬಿಡುವನು. ಪತಿವ
ಶಿರೋಮಣಿಯೆಂದು ಹೆಮ್ಮೆಬಡುವ ರಮಣಿಯನ್ನು ಕುದುರೆಯ
ಕಾಲೊತ್ತುವುದಕ್ಕೆ ಹಚ್ಚುವೆನು. ಇದನ್ನೆಲ್ಲ ತಾವು ಅರಿತೇ ಇರುವಿ

**ಇಂದ್ರ:**—ಮಿತ್ರಾ, ಸತ್ಯ! ಸತ್ಯ! ನನಗೆ ಎರಡು ಆಯುಧಗ
ಒಂದು ವಜ್ರಾಯುಧ; ಎರಡನೆಯದು ನೀನು. ವಜ್ರಾಯುಧದ ಆ
ಜಿತೇಂದ್ರಿಯರಾದ ಮಹಾತ್ಮರ ಮೇಲೆ ನಡೆಯದು. ಆದರೆ ನಿನ್ನ ಶಕ್ತಿ
ಮಾತ್ರ ಸರ್ವತ್ರ ವಿಜಯಿಯಾಗಿದೆ. ಆದುದರಿಂದ ನಿನ್ನಿಂದಲೇ ಈ

ಲೋಕದ ಸಂರಕ್ಷಣೆಯಾಗಿದೆಯೆನ್ನಬೇಕು. ಇಂದು ಪುನಃ ಅಂತಹದೊಂದು ಸಂದರ್ಭವುಂಟಾಗಿದೆ. ನೀನು ಕೈಗೊಟ್ಟರೆ ಮಾತ್ರ ನಾವೆಲ್ಲರೂ ಉಳಿಯು ವೆವು. ಇಲ್ಲವಾದರೆ ಇಲ್ಲ.

**ಮದನ:**—ಎಂತಹ ಮಾತಿದು! ದೇವಲೋಕದ ಹಿತಕ್ಕಾಗಿ ಕೆಲಸ ಮಾಡುವ ಪ್ರಸಂಗಬಂದರೆ ನಾನು ಎಂದೂ ಹಿಂದೆ ಮುಂದೆ ನೋಡಿಲ್ಲ. ಈಗಲಾದರೂ ಹಿಂದೆಗೆಯೆನು. ನನ್ನ ಪ್ರಾಣವೇ ಹೋಗುವ ಸಂದರ್ಭವಿ ದ್ದರೂ ಅದನ್ನು ಕೂಡ ಲಕ್ಷಿಸದೆ ತಮ್ಮ ಕಾರ್ಯವನ್ನು ಮಾಡೇ ಮಾಡುವೆನು. ನನಗೆ ಎದೆಗೊಟ್ಟು ನಿಲ್ಲುವ ಧೀರನಾವನಿರುವನು? ಪ್ರತ್ಯಕ್ಷ ಶಂಕರನೇ ಆಗಲೊಲ್ಲನೇಕೆ? ಒಂದೇಒಂದು ಸಮ್ಮೋಹನಾಸ್ತ್ರದಿಂದ ಆತನ ಎದೆಯನ್ನು "ಝಲ್" ಎಂದು ನೀಳಿಬಿಡುವೆನು. ನನ್ನ ಪರಮಮಿತ್ರ ನಾದ ವಸಂತರಾಜನ ಸಹಾಯವಿದ್ದರಂತೂ ಕೇಳುವುದೇನಿದೆ? ತಮ್ಮ ಕಾರ್ಯವೇನಿರುವುದೋ ಆಜ್ಞಾಪಿಸಿ ಒಮ್ಮೆ ಈ ಸೇವಕನ ಸಾಮರ್ಥ್ಯ ವನ್ನು ಪರೀಕ್ಷಿಸಬೇಕೆಂದು ಬಿನ್ನಯಿಸುವೆನು.

ಇಂದ್ರನು ತಾರಕಾಸುರನಿಂದ ತಮಗಾಗುವ ಪೀಡೆಯನ್ನೆಲ್ಲ ವರ್ಣಿ ಸಿದನು. ಬ್ರಹ್ಮದೇವನ ಅಪ್ಪಣೆಯನ್ನೂ ಹೇಳಿದನು. ತಾವೆಲ್ಲರೂ ಕೂಡಿ ಪ್ರಕೃತಕ್ಕೆ ನಿರ್ಣಯಿಸಿರುವ ಕಾರ್ಯದ ಆಲೋಚನೆಯನ್ನೂ ಉಸಿರಿದನು.

ದೇವಸಭೆಯಲ್ಲಿ ತನಗೆ ದೊರೆದ ಸನ್ಮಾನದ ನವಿಗೆ ಮನಸೋತು ಅಹಂಕಾರದಿಂದ ಬಡಬಡಿಸಿದ ಮದನದೇವನು ಈಗ ಸ್ವಲ್ಪ ಆಲೋಚಿಸಬೇ ಕಾಯಿತು. ಆದರೆ ಒಮ್ಮೆ ಆಡಿದ ಮಾತನ್ನು ಆಗಿಂದಾಗ ತಿರುಗಿ ತೆಗೆದುಕೊ ಳ್ಳುವುದು ಆಗದ ಮಾತಾದುದರಿಂದ ಅವನು ಅದೇ ಅಹಂಕಾರವನ್ನೇ ಅವ ಲಂಬಿಸಿ "ಆಯಿತು, ಶಂಕರನ ಸಮಾಧಿಭಂಗದ ಕಾರ್ಯವು ನನಗೆ ಕೂಡಿತು." ಎಂದು ಒಪ್ಪಿಕೊಂಡನು. ದೇವತೆಗಳೆಲ್ಲರೂ ಮದನದೇವನನ್ನು ಪರಿಪರಿ ಯಿಂದ ಕೊಂಡಾಡಿದರು. ಸಭಾವಿಸರ್ಜನೆಯಾಯಿತು.

ತನ್ನ ಅಳವನ್ನು ಅರಿಯದೆ ಅನ್ಯರ ಮುಂದೆ ಆಡಂಬರಕ್ಕಾಗಿ ಆಡಿದ ಮಾತು ಮೈಮೇಲೆ ಬಂದುದನ್ನು ನೋಡಿ ಮದನದೇವನು ಸ್ವಲ್ಪ ಚಿಂತಾ ಕ್ರಾಂತನಾಗಿ ಮನೆಗೆ ಬಂದನು. ರತಿದೇವಿಯು ಪತಿಯ ಬರವನ್ನು ನೋಡುತ್ತ ತಲೆವಾಗಿಲಲ್ಲಿಯೇ ನಿಂತಿದ್ದಳು. ಆತನ ವಿಚಾರಮಗ್ನವಾದ

ಮನಸ್ಸಿನ ಪ್ರತಿಬಿಂಬವನ್ನು ಕಳೆಗುಂದಿದ ಮುಖದಲ್ಲಿ ನೋಡಿ ಆತನಿಗೆ ದೇ
ಸಭೆಯಲ್ಲಿ ಏನೋ ಒಂದು ಕಾರಣದಿಂದ ಅಪಮಾನವಾಯಿತೆಂದು ತ
ಸಿದಳು. ಆದರೆ ಒಮ್ಮೆಲೆ ಆ ವಿಷಯದ ಮಾತನ್ನು ಎತ್ತದೆ ತನ್ನ ಪ್ರೇ
ಮಯವಾದ ಮುಖಮುದ್ರೆಯಿಂದ ಪತಿಯನ್ನು ಸಂತವಿಸಿ ಕರೆದೊಯ
ನಾಲ್ಕು ಅತ್ತಿತ್ತಲಿನ ಸುಖಸಲ್ಲಾಪಗಳಿಂದ ಆತನ ಮನಸ್ಸನ್ನು ಸಮಾಧ
ಪಡಿಸಿದಳು. ತರುವಾಯ ಮಾತಿನ ಸಂದರ್ಭವನ್ನು ನೋಡಿಕೊಂ
ಅಂದಿನ ದೇವಸಭೆಯ ವೃತ್ತಾಂತವನ್ನು ಎತ್ತಿದಳು. ಮದನದೇವನು ನ
ಸಂಗತಿಯನ್ನೆಲ್ಲ ಹೇಳಿದನು. ಆದರೆ ಪತ್ನಿಯ ಮುಂದೆ ತನ್ನ ಪೌರುಷವ
ಬಿಡುವುದಾಗಲಿ, ತನ್ನಿಂದ ಪ್ರಮಾದವಾಯಿತೆಂದು ಒಪ್ಪಿಕೊಳ್ಳುವುದಾಗ
ಅಹಂಕಾರ ಶೀಲನಾದ ಮದನದೇವನಿಂದ ಎಂದೂ ಆಗದ ಮಾತು. ಅವ
ಹೆಂಡತಿಯ ಮುಂದೆ ಮತ್ತಿಷ್ಟು ಆಡಂಬರವನ್ನು ತೋರಿಸಿ ತನ್ನ ಪ್ರಿ
ಮಿತ್ರನಾದ ವಸಂತನ ಸಹಾಯದಿಂದ ಒಂದರಗಳಿಗೆಯಲ್ಲಿ ಹರನ ಸಮಾ
ಭಂಗಮಾಡಿ ದೇವಲೋಕದ ಉದ್ಧಾರಮಾಡುವೆನೆಂದೂ ತನ್ಮೂಲಕ ತ
ದೇವಲೋಕದಲ್ಲಿ ಇನ್ನಿಲ್ಲದಷ್ಟು ಮಾನಮರ್ಯಾದೆಗಳು ದೊರೆಯುವುವೆಂ
ತಾನು ಶಚೀಪತಿಗೆ ಸಮಾನವಾದ ಮನ್ನಣೆಯನ್ನು ಪಡೆದ ಮೇಲೆ ನಿ
ಶಚೀದೇವಿಗೆ ಸರಿಯಾದ ಪೂಜ್ಯತೆಯು ತಾನಾಗಿಯೇ ಬರುವುದೆಂದೂ ಬಣ್ಣಿ
ನುಡಿದನು.

ರತಿದೇವಿಗೆ ಪತಿಯ ಪೌರುಷದಿಂದ ಆನಂದವಾಗಲಿಲ್ಲ, ಇಷ್ಟೇ ಅ
ಅವನ ಮೂರ್ಖತನಕ್ಕಾಗಿ ತುಂಬ ದುಃಖವೆನಿಸಿತು. ಭವಿಷ್ಯದ ವಿಪತ್ತಿ
ಭಾವನೆಯಿಂದ ಅವಳ ಎದೆಯೊಡೆದು ನೀರಾಯಿತು. ಶಂಕರನ ಸಮಾ
ಭಂಗದಂತಹ ಅಸಾಧ್ಯ ಕಾರ್ಯಕ್ಕೆ ಕೈಹಾಕಿದ ಪತಿಗೆ ಎಂದೂ ಮಂ
ವಾಗಲಾರದೆಂದು ಅವಳು ನಿರ್ಣಯಿಸಿಕೊಂಡಳು. ಮತ್ತು ಇಂತಹ ಅಸಾ
ಕಾರ್ಯಕ್ಕೆ ಕೈಹಾಕಲಾಗದೆಂದು ಪರಿಪರಿಯಿಂದ ಪತಿಯನ್ನು ಬೇಡಿಕೆ
ಡಳು. ವಚನಬದ್ಧನಾದ ಮದನದೇವನು ರತಿದೇವಿಯ ಮಾತುಗಳನ
ಅಲ್ಲಗಳೆದು ಕಾರ್ಯವನ್ನು ಆರಂಭಿಸಲೇಬೇಕಾಯಿತು.

ಹಿಮಗಿರಿಯ ಬೆಟ್ಟದ ಸಾಲುಗಳಲ್ಲಿ ತನ್ನ ಹೊಂಬಣ್ಣದ ಹೊಸ ಕಿ
ಗಳನ್ನು ಹರಹುತ್ತ ರಾತ್ರಿಯ ಭೀಷಣವಾದ ಚಳಿಯಿಂದ ಕಂಗೆಟ್ಟ ಜಿ

ಜಂತುಗಳ ಅಂತರಂಗದಲ್ಲಿ ಚೇತನೆಯನ್ನುಂಟುಮಾಡುತ್ತ ಸೂರ್ಯದೇವನು ಆದೇ ಆಗ ಮೇಲಕ್ಕೇರಿಬರುತ್ತಲಿದ್ದನು. ಚಳಿಯಿಂದ ಸೆಟೆದುನಿಂತ ಗಿಡ ಮರಗಳು ಮೆಲ್ಲನೆ ಅಲ್ಲಾಡತೊಡಗಿದ್ದುವು. ನಾಲ್ಕು ಕಡೆಗಳಲ್ಲಿಯೂ ಮೃತಪ್ರಾಯವಾಗಿರುವ ಹಸುರು ಹುಲ್ಲುಗಳ ತುದಿಯಲ್ಲಿ ಸ್ವಚ್ಛವಾದ ನೀರ್ವನಿಗಳು ಮುತ್ತಿನ ಮಣಿಗಳಂತೆ ಹೊಳೆಯುತ್ತಿದ್ದುವು. ಪಶುಗಳು ಇನ್ನೂ ತಮ್ಮ ಹಕ್ಕೆಯನ್ನು ಬಿಟ್ಟು ಆಹಾರಕ್ಕಾಗಿ ಹೊರಟಿರಲಿಲ್ಲ. ಪಕ್ಷಿ ಸಂಕುಲವು ಪ್ರಭಾತ ಸೂಚನೆಗಾಗಿ ಒಮ್ಮೆ ಕಿಲಕಿಲನಾದಗೈದು ಚಳಿಯ ಪೀಡೆಯಿಂದ ಪುನಃ ಮೌನವನ್ನು ತಳೆದಿದ್ದಿತು. ಇಂತಹ ವೇಳೆಯಲ್ಲಿ ಮದನದೇವನು ತನ್ನ ಮಿತ್ರ ವಸಂತನನ್ನೊಡಗೊಂಡು ಹರನ ಸಮಾಧಿ ಭಂಗಕ್ಕಾಗಿ ಹೊರಟನು. ಪತಿಯ ಅವಿವೇಕಕ್ಕಾಗಿ ಮನನೊಂದ ರತಿದೇವಿಯು ಭವಿಷ್ಯದ ಅನಿಷ್ಟಕ್ಕಾಗಿ ಕಂಗೆಟ್ಟು ಆತನನ್ನು ಬಿಟ್ಟಿರಲಾರದೆ ಅನುಸರಿಸಿ ನಡೆದಿದ್ದಳು. ಕಂದಿಕುಂದಿದ ಆಕೆಯ ಮುಖದಲ್ಲಿ ಮದನದೇವನ ಅಪಯಶದ ಕಲೆಗಳು ತುಂಬಿತುಳುಕುತ್ತಿದ್ದುವು; ಆಕೆಯ ಕಣ್ಣುಗಳಿಂದ ನೀರು ಸುರಿಯುತ್ತಿದ್ದಿತು.

ಮನ್ಮಥ ವಸಂತರ ಆಗಮನದಿಂದ ಹಿಮಗಿರಿಯಲ್ಲಿ ಅನೇಕ ಆಕಸ್ಮಿಕ ಪರಿವರ್ತನೆಗಳುಂಟಾದುವು. ಸೂರ್ಯದೇವನು ಉತ್ತರಾಯಣದಲ್ಲಿದ್ದಂತೆ ತೋರಿದನು. ಮಲಯಾನಿಲವು ಸುಳಿಯತೊಡಗಿತು. ತಟ್ಟನೆ ಗಿಡಬಳ್ಳಿಗಳೆಲ್ಲ ಚಿಗಿತುವು; ಹೂಕಾಯಿಗಳಾದುವು. ಕರ್ಣಿಕಾ ಕುಸುಮಗಳು ವಾಸನೆಯಿಲ್ಲದಿದ್ದರೂ ಮನೋಹರವಾದ ಬಣ್ಣದಿಂದ ತಲೆಯೆತ್ತಿ ಮೆರೆಯತೊಡಗಿದುವು. ಶ್ಯಾಮಲಾಂಗಿಯರ ಎದೆಯಲ್ಲಿಯ ಉಗುರಿನ ಕೆಂಬಣ್ಣದ ಗೆರೆಗಳಂತೆ ವನದೇವಿಯ ಹೃದಯದಲ್ಲಿ ಅರೆಬಿರಿದ ಪಾಲಾಶ ಕುಸುಮಗಳು ಬಾಲ ಸೂರ್ಯನ ಕೆಂಬಣ್ಣದ ಕಾಂತಿಯನ್ನು ಬೀರುತ್ತಿದ್ದುವು. ಅಕಸ್ಮಾತ್ತಾಗಿ ವನಶ್ರೀಯು ಬದಲಾದಂತೆ ಪ್ರಾಣಿಗಳ ಸ್ಥಿತಿಯೂ ಒಮ್ಮೆಲೆ ಬದಲಾಯಿತು. ತಪೋವನವಾಸಿಗಳಾದ ಸಂಯಮಿಗಳ ಮನಸ್ಸು ಕೂಡ ಚಂಚಲವಾಗ ತೊಡಗಿತು. ಮದನನೂ ರತಿದೇವಿಯೂ ವಸಂತನೂ ಒಂದಾಗಿ ಬಂದಿರುವರು! ಅಂದಬಳಿಕ ಕೇಳುವುದೇನು? ಪಶುಪಕ್ಷಿಗಳು ಅಕಾಲದಲ್ಲಿಯೇ ಜೋಡಿಯಾಗಿ ತಿರುಗಹತ್ತಿದುವು. ಸಾರಾಂಶ: ಹಿಮಾಲಯದೊಳಗಿನ ಸಕಲ

ವಸ್ತುಗಳಲ್ಲಿಯೂ ಮದನದೇವನ ಪ್ರಭಾವವು ಸ್ಫುಟವಾಗಿ ತೋರಿತು.

ಮದನದೇವನ ಮಹಿಮೆಯಿಂದ ಹಿಮಾಲಯದೊಳಗಿನ ಪಶುಪಕ್ಷಿಗ
ಳೆಲ್ಲ ಹೆಣ್ಣುಗಂಡು ಕೂಡಿ ವಿಹರಿಸತೊಡಗಿದುವು. ಒಂದೇ ಕುಸುಮದ
ಕ್ರೀಡಿಸುವ ಭ್ರಮರಗಳ ಜೋಡಿಗಳಲ್ಲಿ ತಮ್ಮ ಪ್ರಿಯರು ಕುಡಿದು ಉಳಿಸಿ
ಮಕರಂದ ರಸದ ಸೇವನೆಯಿಂದ ಉನ್ಮತ್ತವಾದ ಹೆಣ್ಣು ಭ್ರಮರಗಳ ಗುಂ
ಜಾರವದಿಂದ ನಿಕುಂಜಗಳು ಅತ್ಯಾನಂದಕರವಾಗಿ ತೋರಿದುವು. ಗಂಡೆರ
ಕೋಡಿನ ಸ್ಪರ್ಶದಿಂದ ಅರ್ಧಮುಚ್ಚಿದ ಕಣ್ಣುಗಳಿಂದ ಶೋಭಿಸುವ ಹೆಣ್ಣೆ
ಳೆಗಳು ತಮ್ಮ ಚಪಲಗತಿಯನ್ನು ಮರೆತು ಅಲ್ಲಲ್ಲಿ ನಿಂತುಕೊಂಡಿರ
ವುವು. ಹೆಣ್ಣಾನೆಗಳು ತಮ್ಮ ಪ್ರಿಯಕರಗಳ ಸುಂಡಿಲುಗಳೊಡನೆ ತಮ್ಮ
ಸುಂಡಿಲುಗಳನ್ನು ಸುತ್ತಿ ಚೆಲ್ಲಾಟವಾಡಹತ್ತಿದುವು. ಆಕಾಶದಲ್ಲಿ ಸಂಚ
ಸುವ ಗಂಧರ್ವದಂಪತಿಗಳಲ್ಲಿ ಗಂಡನು, ಹಾಡಿ ದಣಿದ ತನ್ನ ಪ್ರಿಯೆಯ
ಮಧುಪಾನದಿಂದ ಮತ್ತವಾದ ಕಣ್ಣುಗಳಲ್ಲಿ ತಿರುತಿರುಗಿ ಮುದ್ದಿಟ್ಟ
ಗುರುತುಗಳನ್ನು ಮೂಡಿಸತೊಡಗಿದನು; ಅವರ ಮಧುರವಾದ ಗಾಯನ
ಸ್ವರವು ಆಕಾಶದಲ್ಲೆಲ್ಲ ತುಂಬಿ ಮಾರ್ದನಿಗೊಂಡಿತು. ಆ ಮೋಹಕವಾ
ಗಾಯನದ ಧ್ವನಿಯು ಯೋಗಮಗ್ನನಾದ ತ್ರಿಪುರಾರಿಯ ಹೃದಯವನ್ನು
ಕೂಡ ಭೇದಿಸಿ ಒಳಸೇರುವಂತೆ ತೋರಿತು.

ಸೃಷ್ಟಿಯ ಈ ತರದ ಆಕಸ್ಮಿಕ ಪರಿವರ್ತನೆಯಿಂದ ತಪೋವನದೊಳಗಿ
ಪ್ರಮಥಗಣಗಳ ಮನಸ್ಸು ಚಂಚಲವಾಗತೊಡಗಿತು. ಆದರೆ ಜಿತೇಂದ್ರಿ
ಯನೂ ಕರ್ತವ್ಯಪರಾಯಣನೂ ಭಕ್ತಶ್ರೇಷ್ಠನೂ ಆದ ನಂದಿಯು ತಪೋ
ವನದ ಮಹಾದ್ವಾರದಲ್ಲಿ ತ್ರಿಶೂಲಧಾರಿಯಾಗಿ ದ್ವಾರಪಾಲಕನಾಗಿ ನಿಶ್ಚ
ನಾಗಿ ನಿಂತುಕೊಂಡಿದ್ದನು. ಅವನು ಪ್ರಮಥಗಣಗಳ ಚಂಚಲತೆಯನ್ನು ಕಂಡ
ತರ್ಜನಿಯ ಬೆರಳಿನ ತರ್ಜನೆಯಿಂದಲೂ ಮುಖಭಾವ, ವಿಸ್ಫಾರಿತ ಸ್ಥಿರದೃ
ಇವುಗಳಿಂದಲೂ ಅವರನ್ನು ಅಡಿಗಡಿಗೆ ಎಚ್ಚರಿಸುತ್ತಿದ್ದನು. ಆತನ
ತರದ ತರ್ಜನೆಯಿಂದ ವಸಂತನು ಕೂಡ ಒಳಸೇರಲು ಅಂಜಿ ಗದಗದನೆ ನಡ
ಗುತ್ತಿದ್ದನು. ತಪೋವನದ ಒಳಭಾಗದಲ್ಲಿ, ಶ್ರೀಶಂಕರನ ಸನ್ನಿಧಿಯಲ್ಲಿ
ನಂದಿಯ ಶಾಸನದಿಂದ ಯಾವ ತೆರದ ಮದನಪ್ರಭಾವವೂ ಕಂಡುಬರಲಿಲ್ಲ
ಕೆಲವು ಹೊತ್ತಿನ ತರುವಾಯ ಮದನದೇವನು ಕಳ್ಳನಹಾಗೆ ನಂದಿಯ ಕಣ

ತಪ್ಪಿಸಿ ಅರಣ್ಯದೊಳಗಿನ ಬೇರೊಂದು ಅಡ್ಡದಾರಿಯಿಂದ ಮೆಲ್ಲಡಿಯಿಡುತ್ತ ಶ್ರೀಶಂಕರನ ಸಮೀಪಕ್ಕೆ ಹೊರಟನು. ದೇವದಾರು ವೃಕ್ಷಗಳ ಮಧ್ಯದಲ್ಲಿ ಒಂದು ಎತ್ತರವಾದ ಬಂಡೆಗಲ್ಲು ವಿಶಾಲವಾಗಿ ಪಸರಿಸಿದ್ದಿತು. ಅದರ ಮೇಲೆ ವ್ಯಾಘ್ರಚರ್ಮವನ್ನು ಹಾಸಿಕೊಂಡು ಯೋಗಿವರ ಶಂಕರನು ಪದ್ಮಾಸನದಲ್ಲಿ ಯೋಗಾಸಕ್ತನಾಗಿ ವಿರಾಜಮಾನನಾಗಿದ್ದನು. ಆತನ ವಿಶಾಲವಾದ ಎದೆಯು ತನ ಮುಂದೆ ಒಂದು ಅಂತರಂಗದ ಧೀರತೆಯನ್ನು ಸಾರುವಂತಿದ್ದಿತು. ಕೈಗಳೆರಡೂ ತೊಡೆಗಳ ಮೇಲೆ ಇಡಲ್ಪಟ್ಟಿದ್ದುವು. ಹಣೆಯಲ್ಲಿಯ ಮೂರನೆಯ ಉರಿಗಣ್ಣು ಬೂದಿಮುಚ್ಚಿದ ಕೆಂಡದಂತೆ ಶಾಂತವಾಗಿದ್ದಿತು. ತಲೆಯಲ್ಲಿ ರಾಜಿಸುವ ಗಂಗೆಯೂ ನಾಗನೂ ಚಂದ್ರನೂ ಶಾಂತರಾಗಿದ್ದರೂ ಬಹು ತೇಜಸ್ವಿಗಳಾಗಿ ಗಾಂಭೀರ್ಯಯುಕ್ತರಾಗಿ ತೋರುತ್ತಿದ್ದರು. ಆತನ ನೇತ್ರತ್ರಯದ ನೋಟವು ಮೂಗಿನ ತುದಿಯಲ್ಲಿ ಒಟ್ಟಾಗಿ ಸ್ಥಿರವಾಗಿದ್ದಿತು.

ಶ್ರೀ ಶಂಕರನ ಈ ತೆರದ ಗಂಭೀರವೂ ಪ್ರಶಾಂತವೂ ಸುಸ್ಥಿರವೂ ಆದ ಯೋಗಾರೂಢ ಸ್ಥಿತಿಯನ್ನು ನೋಡಿ ಮದನದೇವನು ಅಂಜಿ ಹಿಂಜರಿದನು. ದೇವಸಭೆಯೊಳಗಿನ ಅಹಂಕಾರ ಮೂಲಕವಾದ ತನ್ನ ಗರ್ವೋಕ್ತಿಯು ನೆನಪಾದ ಕೂಡಲೆ ಮದನನಿಗೆ ನಾಚಿಕೆ ಬಂದಿತು. ತನ್ನಂತಹ ಸಾವಿರ ಮದನರು ಒಂದಾದರೂ ಶಂಕರನ ಸಮಾಧಿಯನ್ನು ಕೆಡಿಸುವುದು ಅಸಾಧ್ಯವೆಂದು ಅವನಿಗೆ ತೋರಿತು. ಅವನು:—"ಅಯ್ಯೋ! ನಾನು ಎಂತಹ ದುರ್ಮುಹೂರ್ತದಲ್ಲಿ ಈ ಕಾರ್ಯಕ್ಕೆ ಕೈಹಾಕಿದೆನು? ಎಂತಹ ವಿಷಗಳಿಗೆಯಲ್ಲಿ ದೇವಸಭೆಯಲ್ಲಿ ಪ್ರತಿಜ್ಞೆ ಮಾಡಿದೆನು? ಎಂತಹ ಅಶುಭ ಸಮದಲ್ಲಿ ಇಲ್ಲಿಗೆ ಹೊರಟುಬಂದೆನು? ಮಾನವು ಹೋದರೂ ಹೋಗಲಿ, ಗರ್ವಭಂಗವಾದರೂ ಆಗಲಿ, ಶೌರ್ಯ ವೀರ್ಯಗಳಿಗೆ ಕುಂದು ಬಂದರೂ ಬರಲಿ, ಶಿವನ ಸಮಾಧಿಭಂಗವು ಮಾತ್ರ ನನ್ನಿಂದಾಗದ ಮಾತು." ಎಂದು ಭಾವಿಸಿಕೊಂಡನು. ಈ ರೀತಿ ಚಿಂತಿಸುತ್ತಿದ್ದ ಮದನನ ಮನಸ್ಸು ಸಂಶಯ ಸಂಕೋಚ ಸಂಕಟಗಳಿಂದ ಚಂಚಲವಾಗಿ ಬಲು ಬಳಲಿಕೆಗೊಳಗಾಯಿತು. ಚಿಂತೆಯಲ್ಲಿ ಮುಳುಗಿ ಹೋದ ಆತನ ಕೈಯೊಳಗಿನ ಬಿಲ್ಲು ಬಾಣಗಳು ತಾವಾಗಿ ಕಳಚಿಬಿದ್ದುವು.

---

## ಆರನೆಯ ಪರಿಚ್ಛೇದ

# ಮದನಪರಾಭವ



ಇಂತಪ ಕಷ್ಟಮಯ ಸ್ಥಿತಿಯಲ್ಲಿ ಹೆಚ್ಚು ಹೊತ್ತಿನವರೆಗೆ ಅಲ್ಲಿ ನಿಲ್ಲು
ವುದೂ ಮದನನಿಗೆ ಸರಿದೋರಲಿಲ್ಲ. ಅವನು ದ್ವಾರಪಾಲಕನಾದ
ನಂದಿಗೆ ತಿಳಿಯದಂತೆ ಕಳ್ಳದಾರಿಯಿಂದ ಒಳಸೇರಿದಂತೆಯೇ ನಾವಕಾಶ
ವಾಗಿ ಸದ್ದಿಲ್ಲದೆ ಹಿಂದಿರುಗಿ ಹೋಗುವ ಆಲೋಚನೆ ಮಾಡಿದನು. ಅಷ್ಟರಲ್ಲಿ
ಕೈಯಿಂದ ಕಳಚಿಬಿದ್ದ ಪುಷ್ಪಧನುವಿನ ನೆನಪಾಗಲು ಮೆಲ್ಲನೆ ಅದನ್ನು ಎತ್ತಿ
ಕೊಂಡನು. ಮತ್ತು ಹಿಂದಡಿಯಿಡುತ್ತ ಮೆಲ್ಲಮೆಲ್ಲನೆ ಹಿಂಜರಿದನು—
ಪತಿಯ ಈ ಅವಸ್ಥೆಯನ್ನೆಲ್ಲ ದೂರದಲ್ಲಿದ್ದ ರತಿದೇವಿಯು ದುಃಖಾಶ್ರುವಿ
ನಿಂದ ಮಲಿನವಾದ ದೃಷ್ಟಿಯಿಂದ ನೋಡುತ್ತಲಿದ್ದಳು. ಅಕಸ್ಮಾತ್ತಾಗಿ
ಕಾಲೊಳಗಿನ ನೂಪುರಗಳ ಮಂಜುಲವಾದ ಕಿರುದನಿಯು ಮದನನ ಕಿವಿಗೆ
ಕೇಳಿಸಿತು. ಆಶ್ಚರ್ಯ! ಆಶ್ಚರ್ಯಚಕಿತನಾದ ಆತನು ತಟ್ಟನೆ ತಿರುಗಿ
ನೋಡಿದನು. ಪರಮಸುಂದರಿಯಾದ ಯುವತಿಯೊಬ್ಬಳು ತನ್ನ ಗೆಳತಿಯ
ರಿಬ್ಬರೊಂದಿಗೆ ಕೈಯಲ್ಲಿ ಪೂಜಾಸಾಹಿತ್ಯಗಳನ್ನು ಹಿಡಿದುಕೊಂಡು ಶ್ರೀಶಂಕ
ರನ ಸನ್ನಿಧಿಗೆ ನಡೆದಿದ್ದಳು. ತರುಣಿಯು ಮನೋಹರವಾದ ವೇಷದಿಂದ
ಒಪ್ಪುತ್ತಿದ್ದಳು. ವಸಂತಕಾಲದ ತರತರದ ಹೂಗಳಿಂದ ಬಗೆಬಗೆಯ ಅಲಂ
ಕಾರಗಳನ್ನು ರಚಿಸಿ ಆಕೆಯ ಶರೀರವನ್ನು ಸಿಂಗರಿಸಿದ್ದರು. ಅವುಗಳಿಂದ
ಆಕೆಯ ಸ್ವಾಭಾವಿಕವಾದ ಸೌಂದರ್ಯವು ಇಮ್ಮಡಿಸಿ ಉಜ್ವಲವಾಗಿ
ತೋರುತ್ತಿದ್ದಿತು. ಎಳೆಹಸುರಿನಿಂದ ಕೂಡಿದ ಗುಲಾಬೀ ಬಣ್ಣದ ರೇ
ಮೆಯ ಉಡುಗೆತೊಡುಗೆಗಳು ಒಳಗಿನ ಶರೀರಾವಯವಗಳ ಕಾಂತಿಯನ್ನು
ಹೆಚ್ಚಿಸಿ ಹೊರಸೂಸುತ್ತಿದ್ದುವು. ಸುಕುಮಾರಾಂಗಿಯೂ ಪುಷ್ಪಾಲಂಕಾ
ಶೋಭಿತಳೂ ಆದ ಆ ನವಯುವತಿಯು ಹೊಸ ಚಿಗುರು ಹೂಗಳಿಂದೊಪ್ಪು
ಮಲ್ಲಿಕಾಲತೆಯು ಮೆಲ್ಲಮೆಲ್ಲನೆ ತೂನೆಯುವಂತೆ ಮೆಲ್ಲಡಿಯಿಡುತ್ತ ಶಂಕರ

ಸನ್ನಿಧಿಗೆ ನಡೆದಳು, ಆ ಅನುಪಮ ಸುಂದರಿಯಾದ ತರುಣಿಯ ಆಕಸ್ಮಿಕವಾದ ಆಗಮನವನ್ನು ನೋಡಿ, ಹತಾಶನಾದ ಮದನನ ಮನಸ್ಸಿನಲ್ಲಿ ಶಂಕರನ ಸಮಾಧಿಭಂಗದ ವಿಚಾರವು ಮತ್ತೆ ಉದಯಿಸಿತು. ನಿರಾಶೆಯಿಂದ ಬತ್ತಿಹೋದ ಮುಖದಲ್ಲಿ ಪುನಃ ಆಶೆಯ ಲಕ್ಷಣಗಳು ತೋರಿದುವು.

ಆ ತರುಣಿಯು ಪ್ರಿಯತಮೆಯರಾದ ಜಯಾ ವಿಜಯೆಯರಿಂದೊಡಗೂಡಿದ ಪಾರ್ವತೀದೇವಿಯೆಂಬುದನ್ನು ಮದನದೇವನು ಅರಿತುಕೊಂಡನು. ಪಾರ್ವತೀದೇವಿಯು ಮೆಲ್ಲಮೆಲ್ಲನೆ ಶ್ರೀಶಂಕರನ ಸನ್ನಿಧಿಯನ್ನು ಸಾರಿದಳು. ರಮಣಿಯರ ಶರೀರದ ಯಾವ ಯಾವ ಭಾಗಗಳಲ್ಲಿ ಎಂತೆಂತಹ ಅಲಂಕಾರಗಳನ್ನಿಡಬೇಕೆಂಬುದು ಮದನದೇವನಿಗೆ ಸಂಪೂರ್ಣವಾಗಿ ಅವಗತವಾದ ವಿಷಯ. ಆದರೆ ಚದುರೆಯರಾದ ಜಯಾವಿಜಯೆಯರು ಅವನಿಗಿಂತಲೂ ಹೆಚ್ಚು ಚಾತುರ್ಯದಿಂದ ಪಾರ್ವತೀದೇವಿಯ ಅಂಗೋಪಾಂಗಗಳನ್ನು ಸಿಂಗರಿಸಿದ್ದರು. ನಿತಂಬದ ಮೇಲ್ಗಡೆಯಲ್ಲಿ ಬಕುಲ ಮಾಲೆಗಳಿಂದ ರಚಿಸಿದ ಮೇಖಲೆಗೆ ಅಲೆಪಟ್ಟ ಪೂಗೊಂಚಲುಗಳು ಆಕೆಯ ಮಂದಗಮನದಿಂದ ಅತ್ತಿತ್ತ ಅಲೆದಾಡಲು ಮಕರಂದ ರಸದ ಆಶೆಗಾಗಿ ಮುತ್ತುತ್ತಿರುವ ಭ್ರಮರಗಳು ಮುಖದ ಮುಂದೆಯೂ ಕರ್ಣಾಭರಣಗಳ ಕಡೆಗೂ ಮಧುರ ನಿನಾದದೊಡನೆ ಹಾರಿಬರುವುದನ್ನು ಕಂಡು ಪಾರ್ವತೀದೇವಿಯು ಅಂಜಿ ಮೆಲ್ಲನೆ ಎಡಗೈಯಿಂದ ಅವನ್ನು ನಿವಾರಿಸುತ್ತಿದ್ದಳು. ಆಕೆಯ ಸರ್ವಾಂಗ ಸೌಷ್ಟವವನ್ನು ಕಂಡು ತಾನೇ ಸುಂದರಿಯೆಂದು ಹೆಮ್ಮೆಬಡುವ ರತಿದೇವಿಯು ಕೂಡ ನಾಚಿ ತಲೆವಾಗಿದಳು.

ಪಾರ್ವತೀದೇವಿಯ ಆಗಮನವನ್ನು ಕಂಡು ಮದನನು ಧೈರ್ಯವನ್ನವಲಂಬಿಸಿ ಮತ್ತೆ ಹುರುಪುಗೊಂಡನು. ಅವನು ಕ್ಷಣಕಾಲದ ಮೊದಲು ಯೋಗಾರೂಢನಾದ ಶಂಕರನ ಸ್ಥಿತಿಯನ್ನು ಕಂಡು ಆತನ ತಪೋಭಂಗ ಮಾಡುವುದು ಅಸಾಧ್ಯವೆಂದು ಭಾವಿಸಿ ನಿರಾಶನಾಗಿದ್ದನು; ಆತನ ನಿಶ್ಚಲವೂ ಗಂಭೀರವೂ ಆದ ಧ್ಯಾನಮಗ್ನಸ್ಥಿತಿಯನ್ನು ನೋಡಿ ಭಯಚಕಿತನಾಗಿದ್ದನು. ಆದರೆ ಈಗ ಪಾರ್ವತೀದೇವಿಯ ಅನುಪಮವಾದ ಸೌಂದರ್ಯರಾಶಿಯನ್ನು ನೋಡಿದುದರಿಂದ ಅವನ ಮನಸ್ಸಿನ ನಿರಾಶ್ರಿತವಾದ ಆಶೆಗೆ ಭದ್ರವಾದ ಆಧಾರವು ದೊರೆತಂತಾಯಿತು. ತನ್ನ ಪುಷ್ಪಶರದ ಆಘಾತ

ದಿಂದ ಚಂಚಲವಾದ ಶಂಕರನ ಮನಸ್ಸನ್ನು ಪಾರ್ವತೀದೇವಿಯ ಅನುಪಮ ಸೌಂದರ್ಯ ತಾರುಣ್ಯಗಳಿಂದ ಮೆರೆಯುವ ಶರೀರದಿಂದ ಹೊರಡುವ ವಿದ್ಯು ತ್ತರಂಗಗಳಿಂದ ಕ್ಷಣಮಾತ್ರದಲ್ಲಿ ಹರಣಮಾಡಬಹುದೆಂದು ಮದನನು ನಿಶ್ಚ ಯಿಸಿಕೊಂಡನು. ಆದುದರಿಂದ ಅವನು ತನ್ನ ಬಿಲ್ಲಿಗೆ ಪೂಬಾಣಗಳನ್ನೇರಿಸಿ ಗುರಿನೋಡಿ, ಅನುಕೂಲವಾದ ಸಮಯವನ್ನು ಇದಿರುನೋಡುತ್ತಿದ್ದನು.

ಪಾರ್ವತೀದೇವಿಯು ಯೋಗೀಶ್ವರನ ಸಮೀಪಕ್ಕೆ ಬಂದಳು. ಹೃದ ಯದಲ್ಲಿ ಗಿರಿನಂದಿನಿಯ ಛಾಯೆ ಬಿದ್ದುದರಿಂದಲೋ ಏನೋ ಎಂಬಂತೆ ಅದೇ ಕಾಲಕ್ಕೆ ಶಂಕರನ ಸಮಾಧಿಭಂಗವಾಗಿ ಆತನಿಗೆ ಎಚ್ಚರೊಡೆಯಿತು. ಪ್ರತಿಬಂಧಿಸಲ್ಪಟ್ಟ ನಿಶ್ವಾಸವಾಯುವು ಮೆಲ್ಲನೆ ಹೊರಬೀಳತೊಡಗಿ ದೃಢ ವಾದ ವೀರಾಸನವು ಶಿಥಿಲವಾಯಿತು. ಧ್ಯಾನಮುಕ್ತವಾದ ಕಣ್ಣುಗಳು ಮೆಲ್ಲನೆ ತೆರೆದುವು. ಮೃತದೇಹದಲ್ಲಿ ಜೀವನ ಸಂಚಾರವಾಗುವಂತೆ ಶಂಕರನ ಅಂಗೋಪಾಂಗಗಳು ಅಲ್ಲಾಡಿ ಪಂಚಪ್ರಾಣಗಳು ಸಂಚರಿಸತೊಡಗಿದುವು.

ದೇವಾಧಿದೇವನ ಶಾಂತವಾದ ದೃಷ್ಟಿಯು ತನ್ನ ಮೇಲೆ ಬಿದ್ದಿರುವು ದನ್ನು ನೋಡಿ ಪಾರ್ವತೀದೇವಿಯು ನಾಚಿಕೆಯಿಂದ ಅಧೋವದನೆಯಾಗಿ ಸಾಷ್ಟಾಂಗ ನಮಸ್ಕಾರ ಮಾಡಿದಳು. ತಿರುಗಿ ಏಳುವಾಗ ಮುಖದ ಮೇಲಿನ ಆವರಣವು ಅಕಸ್ಮಾತ್ತಾಗಿ ಸರಿದುಬಿದ್ದಿತು. ಒಮ್ಮೆಲೆ ಮೋಡವು ಹರಿಯಲು ಚಂದ್ರಬಿಂಬವು ಪ್ರಕಾಶಮಾನವಾಗುವಂತೆ, ಪಾರ್ವತಿ ದೇವಿಯ ಮುಖಕಾಂತಿಯ ಕಿರಣಗಳು ಶಂಕರನ ಹೃದಯವನ್ನು ಭೇದಿಸಿ ಒಳಸೇರಲು ಬಯಸುವುವೋ ಎಂಬಂತೆ ಹೊರಸೂಸಿದುವು. ಪಾರ್ವತಿ ದೇವಿಯು ಎದ್ದು ಪುಷ್ಪಾಂಜಲಿಯನ್ನು ಆತನ ಪಾದಗಳಿಗರ್ಪಿಸಿದಳು. ಸಂತುಷ್ಟನಾದ ಭಕ್ತವತ್ಸಲನು, 'ಅನುರೂಪನೂ ಅನನ್ಯಾಸಕ್ತನೂ ಆದ ಪತಿಯನ್ನು ಪಡೆ' ಎಂದು ಆಶೀರ್ವದಿಸಿದನು. ಅತ್ತ ಮದನದೇವನು ತನ್ನ ನನೆವಿಲ್ಲಿಗೆ ಸಮ್ಮೋಹನಾಸ್ತ್ರವನ್ನು ಹೂಡಿ ಗುರಿನೋಡುತ್ತಲಿದ್ದನು.

ಯೋಗೀಂದ್ರನಾದ ಭೂತೇಶನಿಗೆ ಅರ್ಪಿಸುವುದಕ್ಕೆಂದು ಪಾರ್ವತಿ ದೇವಿಯು ಕಮಲದ ಮಣಿಗಳ ಜಪಮಾಲೆಯನ್ನು ತಂದಿದ್ದಳು. ಪತಿಯ ಆಶೀರ್ವಚನವನ್ನು ಕೇಳಿ ಆಕೆಯ ಮುಖವು ನಾಚಿಕೆಯಿಂದ ಆರಕ್ತವಣ

ಪ್ಪಾಯಿತು. ಆಕೆಯು ಮೆಲ್ಲನೆ ಮುಂದೆ ಬಂದು ತಾನು ತಂದಿದ್ದ ಜಪಮಾಲೆಯನ್ನು ಭಕ್ತಿಪೂರ್ವಕವಾಗಿ ಶಂಕರನ ಪಾದಗಳಿಗೆ ಅರ್ಪಿಸಲು ಉದ್ಯುಕ್ತಳಾದಳು. ಭಕ್ತಾಧೀನನಾದ ಶಂಕರನು ಆಕೆಯ ಭಕ್ತಿಪೂರ್ವಕವಾದ ಕಾಣಿಕೆಯನ್ನು ಆನಂದದಿಂದ ಸ್ವೀಕರಿಸುವೆನೆಂದು ತಾನೇ ಕೈನೀಡಿದನು. ಮದನದೇವನಿಗೆ ಸಮಯವು ಸಾಧಿಸಿತು ! ಅವನು ತನ್ನ ಅಮೋಘವಾದ ಸಮ್ಮೋಹನಾಸ್ತ್ರವನ್ನು ಶಂಕರನ ಹೃದಯಕ್ಕೆ ಗುರಿನೋಡಿ ಎಸೆದನು.

ನೀಲವಾದ ಆಕಾಶದೇಶದಲ್ಲಿ ಚಂದ್ರಬಿಂಬದ ಉದಯವಾದೊಡನೆಯೇ ಸಮುದ್ರವು ಚಂಚಲವಾಗಿ ಉಕ್ಕೇರುವಂತೆ ಶಂಕರನ ಹೃದಯದ ಸ್ಥಿತಿಯಾಯಿತು. ಆತನು ತನ್ನ ಮುಂದೆ ಅಧೋವದನೆಯಾಗಿ ಕುಳಿತಿರುವ ಪಾರ್ವತಿಯ ಅನುಪಮ–ಸೌಂದರ್ಯರಾಶಿಯೇ ಆಗಿರುವ–ಶರೀರಾವಯವಗಳನ್ನು ಒಮ್ಮೆ ಲೋಲುಪ ದೃಷ್ಟಿಯಿಂದ ನೋಡಿದನು. ಆತನ ದೃಷ್ಟಿಪಾತದಿಂದ ದೇವಿಯ ಮನಸ್ಸಿನಲ್ಲಿ ಅನನುಭೂತವಾದ ಆನಂದ ಸಂಚಾರವಾಗಿ ಅವಯವಗಳಲ್ಲಿ ಕಂಪನ ಹುಟ್ಟಿ ನೂತನವಾಗಿ ಮುಗುಳೊಡೆದ ಕದಂಬದಂತೆ ಶರೀರವು ರೋಮಾಂಚಿತವಾಯಿತು. ಆಕೆಯು ಲಜ್ಜಾವನತಮುಖಿಯಾಗಿ ಭೂಮಿಯನ್ನು ನೋಡುತ್ತ ಕುಳಿತಳು. ಮದನದೇವನು ಕೃತಾರ್ಥನಾದೆನೆಂದನು.

ಆದರೆ ಪರಕ್ಷಣದಲ್ಲಿಯೇ ಬಹು ಭಯಂಕರವಾದ ವ್ಯಾಪಾರವು ನಡೆಯಿತು. ಜಿತೇಂದ್ರಿಯನಾದ ಶಂಕರನು ಕ್ಷಣಮಾತ್ರದಲ್ಲಿ ಚಂಚಲವಾದ ತನ್ನ ಚಿತ್ತವನ್ನು ಅಧೀನದಲ್ಲಿ ತಂದುಕೊಂಡನು. ತನ್ನ ಮನೋದೌರ್ಬಲ್ಯಕ್ಕಾಗಿ ತನ್ನೊಳಗೆ ತಾನೇ ನಾಚಿಕೊಂಡು ಮನಸ್ಸಿನ ಚಂಚಲತೆಯ ಕಾರಣವನ್ನು ಶೋಧಿಸತೊಡಗಿ ಸುತ್ತುಕಡೆಗೆ ನೋಡಿದನು. ಕಾರ್ಯಸಾಧನೆಯ ಅಹಂಕಾರದಿಂದ ಉನ್ಮತ್ತನಾಗಿ ನಿಂತ ಮದನನು ಅಕಸ್ಮಾತ್ತಾಗಿ ಆತನ ಕಣ್ಣಿಗೆ ಬಿದ್ದನು. ಮದನದೇವನು ಎಡಗಾಲನ್ನು ಮಣಿಸಿ ಮುಂದಿಟ್ಟು ಬಲಗಾಲಿನ ಮೇಲೆ ಶರೀರದ ಭಾರವನ್ನು ಹೇರಿ ಹಿಂಜೋಲಿಯಾಗಿ ನಿಂತು ಎಡಗೈಯಲ್ಲಿ ಬಿಲ್ಲನ್ನೂ ಬಲಗೈಯಲ್ಲಿ ಬಾಣವನ್ನೂ ಹಿಡಿದು ಹೆದೆಯೇರಿಸಿ ಕಿವಿಯವರೆಗೆ ಎಳೆದು ಹಿಡಿದು ಸಾಧಿಸಿದರೆ ಮತ್ತೊಂದು ಕುಸುಮಾಸ್ತ್ರವನ್ನು ಎಸೆಯುವ ಆಲೋಚನೆಯಲ್ಲಿದ್ದನು.

ಮದನದೇವನ ದುರಾಚಾರಪ್ರವರ್ತನೆಯನ್ನು ಕಂಡು ಶಂಕರನ ಮನಸ್ಸಿನಲ್ಲಿ ಕೋಪಾಗ್ನಿ ಪ್ರಜ್ವಲಿಸಿತು. ಅದರ ಹೊಗೆಯು ಹೊರಚಲ್ಲು ವುದೋ ಎನ್ನುವಂತೆ ನಾಸಿಕಾಗ್ರವು ನಡುಗಹತ್ತಿ ಬುಸ್ಸೆಂದು ನಿಶ್ವಾಸವ ಹೊರಟಿತು. ಮದನನ ದುರ್ವ್ಯಾಪಾರದ ನಿರೋಧಕ್ಕಾಗಿ ಶಂಕರನು ತನ್ನ ಬಲಗೈಯನ್ನು ನೀಡಿ ತರ್ಜಿಸಿದನು. ಕೋಪಸಂತಪ್ತನಾದ ಆತನ ಶರೀ ರವು ಮದನನ ಮೇಲೆ ಮುರಿದು ಬೀಳುವುದೋ ಎಂಬಷ್ಟು ಆ ಕಡೆಗೆ ಬಾಗಿತು. ಹಣೆಯೊಳಗಿನ ಉರಿಗಣ್ಣು ತಟ್ಟನೆ ಜಾಜ್ವಲ್ಯಮಾನವಾ ಕಿಚ್ಚಿನ ಬಹು ತೀಕ್ಷ್ಣವಾದ ಪ್ರವಾಹವು ಮದನದೇವನೆಡೆಗೆ ಹೊರಟ ಕ್ಷಣಾರ್ಧದಲ್ಲಿ ಅವನನ್ನು ಸುಟ್ಟು ಬಿಟ್ಟಿತು ! ಮದನದೇವನನ್ನು ಕಾರ್ಯ ದಲ್ಲಿ ತೊಡಗಿಸಿದ ದೇವತೆಗಳು ಹರನ ಅಮೋಘವಾದ ಮಹಿಮೆಯನ್ನು ಬಲ್ಲವರಾದುದರಿಂದ ಮದನನ ಕಾರ್ಯಸಾಧನೆಯ ವಿಷಯದಲ್ಲಿ ಅವರ ಮನಸ್ಸಿನಲ್ಲಿ ಸಂಶಯವು ಇದ್ದೇ ಇದ್ದಿತು. ಆದುದರಿಂದ ಅವರೆಲ್ಲರೂ ಆಕಾಶದಲ್ಲಿ ನೆರೆದು ಏನೇನು ನಡೆಯುವುದೋ ಎಂದು ನೋಡುತ್ತಲಿದ್ದರು ಹರನ ಕೋಪಾಗ್ನಿಯು ಪ್ರಜ್ವಲಿತವಾದೊಡನೆಯೇ ಅವರೆಲ್ಲರೂ ಮೋಸ ವಾಯಿತೆಂದು ಭಾವಿಸಿ ಹಾಹಾಕಾರದೊಡನೆ ಕೆಳಗಿಳಿದು ಬರತೊಡಗಿ "ಪ್ರಭುವೇ, ಕ್ಷಮಿಸು, ಕೋಪವನ್ನು ತಡೆ ! ತಡೆ !" ಎಂದು ಚಿತ್ಕಾರ ಮಾಡತೊಡಗಿದರು. ಹರನ ಕೋಪಾಗ್ನಿಯು ಅವರ ಮಾತುಗಳು ಕೇ ಸುವುದಕ್ಕಿಂತ ಮುಂಚಿತವಾಗಿಯೇ ಮದನನ ದೇಹವನ್ನು ಸುಟ್ಟುಬಿಟ್ಟಿತು

ನಿಮಿಷ ಮಾತ್ರದಲ್ಲಿ ಇಷ್ಟೆಲ್ಲ ಕಾರ್ಯಗಳು ನಡೆದು ಹೋದುವು ಏನಾಯಿತು. ಹೇಗಾಯಿತು, ಮುಂತಾದುವನ್ನು ನೋಡುವುದಕ್ಕೆ ಕೂಡ ಯಾರಿಗೂ ಅವಕಾಶವಿರಲಿಲ್ಲ. ಮದನದೇವನನ್ನು ಈ ರೀತಿಯಾಗಿ ಸುಟ್ಟುಬಿಟ್ಟ ತರುವಾಯ ಮಹಾದೇವನು ಯೋಗಾಸನವನ್ನು ಬಿಟ್ಟು ಮೇಲಕ್ಕೆದ್ದು ಒಮ್ಮೆ ನಾಲ್ಕು ಕಡೆಗೂ ನಿರೀಕ್ಷಿಸಿ ನೋಡಿ "ಈ ಪ್ರಪಂಚಕ್ಕೆ ಧಿಕ್ಕಾರವಿರಲಿ, ಎಲ್ಲಿ ಸ್ತ್ರೀಜಾತಿಯಿರುವುದೋ ಅಲ್ಲಿ ಇಲ್ಲದೊಂದು ಅನ ಹೂತವು ಇದ್ದೇ ಇರುವುದು." ಎಂದು ಸ್ತ್ರೀಯರನ್ನು ಧಿಕ್ಕಾರಗೈದು ಸ್ತ್ರೀರಹಿತವಾಗಿರುವ ಸ್ಥಳಕ್ಕೆ ಹೊರಡುವವನಂತೆ ಮಹಾವೇಗದೊಡನೆ ನಡೆದನು. ಇದಿರಿಗಿರುವ ಪಾರ್ವತೀದೇವಿಯ ಕಡೆಗೆ ಕಣ್ಣೆತ್ತಿ ಕೂಡ



ಕ್ರೋಧಂ ಪ್ರಭೋ ಸಂಹರ ಸಂಹರೇತಿ
ಯಾವದ್ಗಿರಃ ಖೇ ಮರುತಾಂ ಚರಂತಿ॥
ತಾವತ್ಸವಹ್ನಿರ್ಭವ ನೇತ್ರ ಜನ್ಮಾ
ಭಸ್ಮಾವಶೇಷಂ ಮದನಂ ಚಕಾರ॥

ಶ್ರೀ ಲಿ. ಮು. ಹು.

ನೋಡಲಿಲ್ಲ. ಶಂಕರನು ಹೊರಟು ನಡೆಯಲು ಗಣಗಳೂ ಆತನನ್ನು ಅನುಸರಿಸಿ ನಡೆದುವು.

ಇತ್ತ ಪಾರ್ವತೀದೇವಿಯ ಅಂತರಂಗದಲ್ಲಿ ಕಳವಳವುಂಟಾಯಿತು. ನೂತನ ತಾರುಣ್ಯದ ಉತ್ಸಾಹಯುಕ್ತವಾದ ಆಕೆಯ ಅಂತರಂಗದ ಅಭಿಮಾನಕ್ಕೆ ಕಾದ ಕುಡದಿಂದ ಬರೆಯೆಳೆದಂತಾಯಿತು. ಸಹಚರಿಯರಾದ ಜಯಾವಿಜಯೆಯರ ಇದಿರಿಗೆ ಪತಿಯು ಈ ರೀತಿಯಾಗಿ ತನ್ನನ್ನು ಆದರಿಸದೆ ಉಪೇಕ್ಷಿಸಿ, ತಿರಸ್ಕರಿಸಿ ಹೊರಟು ನಡೆದುದನ್ನು ನೋಡಿ ಆಕೆಯ ಮನಸ್ಸಿನಲ್ಲಿ ಅಪಮಾನ, ನಾಚಿಕೆ, ದುಃಖಗಳೆಂಬ ಭಾವನೆಗಳು ಉಕ್ಕಿ ಬಂದುವು. ಕಣ್ಣುಗಳಲ್ಲಿ ನೀರು ದಳ ದಳ ಸುರಿಯಿತು. ಎಷ್ಟು ಯತ್ನಮಾಡಿದರೂ ಆ ದುಃಖವನ್ನು ಹತ್ತಿಕ್ಕಿಕೊಳ್ಳುವುದಾಗಲಿಲ್ಲ. ಆಕೆಗೆ ತನ್ನ ರೂಪ, ಗುಣ, ಯೌವನ, ವಸ್ತ್ರಾಲಂಕಾರಗಳು ಇವೆಲ್ಲ ಇಂದು ವ್ಯರ್ಥವಾಗಿ ತೋರಿದುವು.

ಲೋಕದಲ್ಲಿ ಪತಿಗಾಗಿಯೇ ಸತಿಯ ಜನ್ಮ. ಅವಳ ದೇಹ, ರೂಪ, ಗುಣ, ಮನಸ್ಸು, ಪ್ರಾಣ ಇವೆಲ್ಲಾ ಪತಿಗಾಗಿ! ಪತಿಯ ಉಪಭೋಗಕ್ಕಾಗಿ! ಇವುಗಳಲ್ಲಿ ಯಾವುದರಿಂದಲೂ ಅವಳಿಗೆ ಉಪಯೋಗವಿಲ್ಲ. ಅವಳ ಸತ್ವಶಾಲಿಯಾದ ನಡತೆಗಳು ಕೂಡ ಪತಿಯ ಸಂಪತ್ತುಗಳು. ಸತಿಯ ಸರ್ವಸ್ವವೂ ಪತಿಯದೇ; ಪತಿಯೇ ಅವಳ ಸಂಸಾರ; ಪತಿಯೇ ಅವಳಿಗೆ ಈ ವಿಶ್ವಪ್ರಪಂಚ; ಪತಿಯೇ ಅವಳ ಇಷ್ಟ ದೇವತೆ; ಪತಿಯೇ ಅವಳ ಚತುರ್ವಿಧ ಪುರುಷಾರ್ಥಗಳು. ಪತಿಯಿಲ್ಲದಿದ್ದರೆ ಸತಿಗೆ ಇವುಗಳಲ್ಲಿ ಯಾವುದೂ ಇಲ್ಲ. ಪತಿಯಿಂದ ಪರಿತ್ಯಕ್ತಳಾದ ಸತಿಯು ಇದ್ದರೂ ಇಲ್ಲದಂತೆಯೇ ಸರಿ. ಯಾವ ಸತಿಯು ಪತಿಸೇವೆ, ಪತಿದೇವತೆಯ ಪೂಜೆ, ಇವುಗಳಲ್ಲಿ ನಿರತಳಾಗಿದ್ದುಕೊಂಡು ಪತಿಯನ್ನು ಸಮಾಧಾನಪಡಿಸಿ ಅವನನ್ನು ಸುಖಪಡಿಸಲಾರಳೋ ಅವಳ ಜನ್ಮವು ವ್ಯರ್ಥ! ಅವಳ ಜೀವನವು ಅಂಧಕಾರಮಯ! ಅವಳ ಸಂಸಾರವು ಶೂನ್ಯ! ಅವಳು ಹೆಣ್ಣೆಂಬ ಹೆಸರಿಗೆ ಅಯೋಗ್ಯಳು. ಅವಳು ತನ್ನ ಪತಿಯ ಸಂಸಾರದಲ್ಲಿ ಒಂದು ಭಯಂಕರವಾದ ವ್ಯಾಧಿಯಂತಾಗುವಳು. ಇಂತಿರುವುದರಿಂದ ಪತಿಯಿಂದ ತಿರಸ್ಕಾರ ಹೊಂದಿದ (ಅಜ್ಞಾತವಾಗಿಯೇ ಆಗಲೊಲ್ಲದೇಕೆ?) ಪಾರ್ವತೀದೇವಿಗೆ ಆ ಸಮಯದಲ್ಲಿ ಮರಣವೇ ಸುಖಕರವಾಗಿ ತೋರಿತಲ್ಲದೆ ಇನ್ನು ಪ್ರಪಂಚದಲ್ಲಿ ಜೀವಿಸು

ವುದು ಬಹು ಕಷ್ಟಕರವೆನಿಸಿತು. ಆಕೆಯು ತನ್ನ ಸಖಿಯರೊಡನೆ ಒಂದು
ರವನ್ನು ಕೂಡ ಬಾಯಿಬಿಚ್ಚಿ ನುಡಿಯಲಿಲ್ಲ. ತನ್ನ ಪುಷ್ಪಾಲಂಕಾರಗಳನ್ನೆ
ತೆಗೆದೊಗೆದು ಸಿಡಿಲಿನ ಜಳತಾಗಿದ ಹೂಮಾಲೆಯಂತೆ ಕಂದಿಕುಂದಿ ನಿಟ್ಟು
ಸಿರು ಬಿಡುತ್ತ ಮನೆಯ ದಾರಿಯಿಂದ ನಡೆದಳು.

ಒಳ್ಳೆಯ ಸುದ್ದಿಗಿಂತಲೂ ಕೆಟ್ಟ ಸುದ್ದಿ ಬಹು ಬೇಗ ಹಬ್ಬುವುದು
ಮದನನ ಪರಾಭವ, ಶಂಕರನ ಸ್ಥಾನಾಂತರಗಮನ, ಪಾರ್ವತಿಯ
ದುಃಖ ಇವುಗಳ ವಾರ್ತೆಯು ಕ್ಷಣಾರ್ಧದಲ್ಲಿ ಔಷಧಿಪ್ರಸ್ಥಪುರದಲ್ಲೆ
ಹಬ್ಬಿತು. ಪರ್ವತರಾಜನೂ ಮೇನಾದೇವಿಯೂ ಇವನ್ನೆಲ್ಲ ಕೇಳಿ ಗಾಬ
ಯಾಗಿ ಮಗಳ ಬಳಿಗೆ ಓಡಿಬಂದರು. ಸರೋವರದಿಂದ ಕಿತ್ತು ಬಿಸಿಲ
ಚೆಲ್ಲಿದ ಕಮಲದಂತೆ ಒಣಗಿದ ಮಗಳ ಮುಖವನ್ನು ನಡುದಾರಿಯಲ್ಲಿಯೆ
ಕಂಡು ಬಹು ದುಃಖಿತರಾದರು. ಮೇನಾದೇವಿಯು ಮಗಳನ್ನು ಪರಿಪ
ಯಿಂದ ಸಮಾಧಾನಪಡಿಸುತ್ತ ಅರಮನೆಗೆ ಕರೆದೊಯ್ದಳು.

ಒಂದೇ ಒಂದು ಕ್ಷಣದಲ್ಲಿ ಮದನದೇವನು ಶ್ರೀಶಂಕರನ ಮೇ
ಸಮ್ಮೋಹನಾಸ್ತ್ರವನ್ನು ಎಸೆದನು; ಶಂಕರನ ಉರಿಗಣ್ಣಿನಿಂದ ಸುಟ್ಟು ಬೂ
ಯಾದನು. ಕೋಪದಿಂದ ಸಂತಪ್ತನಾದ ಶಂಕರನು ಹೊರಟು ನಡೆದನ
ಭೂತಗಣಗಳು ಆತನನ್ನು ಅನುಸರಿಸಿದುವು. ದುಃಖಸಂತಾಪಗಳಿಂ
ಮನಸ್ಸು ಮರುಗುತ್ತಿರುವ ಪಾರ್ವತೀದೇವಿಯು ಜಯಾವಿಜಯೆಯರೊ
ದಿಗೆ ಅರಮನೆಗೆ ಹೋದಳು. ಒಂದೇ ಒಂದು ನಿಮಿಷದ ಮೊದಲು ಸಕ
ಜನಾನಂದಕರವಾದ ತಪೋವನವು ಈಗ ಮದನನ ಮಸಣವಾಯಿತು.
ಮಸಣದಲ್ಲಿ ರತಿಯೊಬ್ಬಳು ಮಾತ್ರ ಪತಿಯ ಗುಣಗಳನ್ನು ನೆನೆನೆನೆದು ಪ
ಪರಿಯಿಂದ ಪ್ರಲಾಪಿಸುತ್ತಿದ್ದಳು. ಆಕೆಯ ಪ್ರಲಾಪವನ್ನು ಕೇಳಿ ಹರ
ಕೋಪಕ್ಕೆ ಅಂಜಿ ಓಡಿಹೋದ ವಸಂತನು ಅಲ್ಲಿಗೆ ಬಂದು ಬಹುಪರಿಯಿಂ
ಸಮಾಧಾನಪಡಿಸಿದನು. ಪ್ರಿಯಮಿತ್ರನ ವಿಯೋಗದುಃಖದಿಂದ ಆತ
ಕಣ್ಣುಗಳಿಂದಲೂ ನೀರು ಧಾರೆಯಾಗಿ ಸುರಿಯುತ್ತಿದ್ದಿತು.

ಹಠಾತ್ತಾಗಿ, ಏನೋ ಒಂದು ವಿಚಾರವು ಬಂದಂತಾಗಿ ಪತಿ
ಚಿತೆಯ ಭಸ್ಮದಲ್ಲಿ ಉರುಳಾಡಿ ಗೋಳಾಡುತ್ತಿದ್ದ ರತಿಯು ಎದ್ದು ನಿಂತಳ
ಈ ಆಕಸ್ಮಿಕವಾದ ಪರಿವರ್ತನೆಯನ್ನು ನೋಡಿ ವಸಂತನು ಆಶ್ಚರ್ಯದಿ

ಅತ್ತಿತ್ತ ನೋಡುವಷ್ಟರಲ್ಲಿ ರತಿಯು ತನ್ನ ಪತಿದೇವನ ಸಂಗಡ ತಾನು ಸತಿ ಹೋಗುವೆನೆಂದೂ ತನಗಾಗಿ ಒಂದು ಚಿತೆಯನ್ನು ಸಿದ್ಧಮಾಡಬೇಕೆಂದೂ ವಸಂತನನ್ನು ಕೇಳಿಕೊಂಡಳು. ಪರಿಪರಿಯಿಂದ ಬೋಧಿಸಿದರೂ ಕೇಳದಿರಲು ನಿರುಪಾಯನಾದ ವಸಂತನು ಚಿತೆಯನ್ನು ಸಿದ್ಧಮಾಡಿದನು. ರತಿದೇವಿಯು ಸಮಯೋಚಿತವಾದ ಉಡುಗೆತೊಡುಗೆಗಳನ್ನು ಧರಿಸಿ ಯಥಾವಿಧಿಯಾಗಿ ಪ್ರಜ್ವಲಿಸುವ ಅಗ್ನಿಕುಂಡವನ್ನು ಮೂರು ಸಾರೆ ಸುತ್ತುವರಿದು ತನ್ನ ದೇಹ ವನ್ನು ಅದರಲ್ಲಿ ಈಡಾಡಲು ಇಷ್ಟದೇವತೆಯನ್ನು ಧ್ಯಾನಿಸತೊಡಗಿದಳು. ಧ್ಯಾನವು ಮುಗಿಯಿತು. ಪರಕ್ಷಣದಲ್ಲಿಯೇ ಅವಳ ಶರೀರವು ಅಗ್ನಿನಾರಾ ಯಣನಲ್ಲಿ ಅಡಗಿ ಹೋಗುವುದು, ಇಷ್ಟರಲ್ಲಿ ಆಕಾಶದಲ್ಲಿ ಬಹು ಗಂಭೀರ ವಾದ ವಾಣಿ ಕೇಳಿಸಿತು:—

“ರತಿದೇವಿಯೇ, ನಿನ್ನ ಪತಿಭಕ್ತಿಯು ಅತುಲನೀಯವೇ ಸರಿ. ಇನ್ನೂ ಕೆಲವು ಕಾಲ ಹೇಗಾದರೂ ಧೈರ್ಯವನ್ನವಲಂಬಿಸಿ ಬದುಕಿ ಉಳಿ ಯುವೆಯಾದರೆ ನಿನ್ನ ಪತಿಯನ್ನು ನಿಶ್ಚಯವಾಗಿಯೂ ತಿರುಗಿ ಪಡೆಯುವೆ. ನಿನ್ನ ಪತಿಯು ಪ್ರಭಾವದಿಂದ ಹಿಂದೊಂದು ದಿನ ಬ್ರಹ್ಮದೇವನು ಹಡೆದ ಮಗಳಲ್ಲಿ ಅನುರಕ್ತನಾದನು. ಆ ಅಪರಾಧಕ್ಕಾಗಿ ಮದನದೇವನು ಇಂದು ಈ ವಿಧವಾದ ಶಿಕ್ಷೆಯನ್ನು ಅನುಭವಿಸಬೇಕಾಯಿತು. ಪಾರ್ವತೀದೇವಿಯ ತಪಸ್ಸಿನಿಂದ ಸಂತುಷ್ಟನಾದ ಶಂಕರನು ಆಕೆಯನ್ನು ಕೂಡಿದ ಬಳಿಕ ಮದನನು ಪುನರ್ಜೀವಿತನಾಗುವನು.”

ರತಿಯು ಆಕಾಶವಾಣಿಯನ್ನು ಕೇಳಿ ಸಮಾಧಾನ ತಾಳಿದಳು. ವಸಂ ತನು ಅವಳನ್ನು ಮನೆಗೆ ಕರೆದೊಯ್ದು ತಕ್ಕ ಜೀವನ ಸಾಹಿತ್ಯಗಳನ್ನು ಪೂರೈಸಿ ಕೊಡುತ್ತ ಅವಳ ಜೀವನದ ಸಹಾಯಕನಾದನು.



## ಏಳನೆಯ ಪರಿಚ್ಛೇದ



# ತಪೋವನಗಮನ





ಸೃಷ್ಟಿಕರ್ತನ ಸಾಮ್ರಾಜ್ಯದಲ್ಲಿ ಸಂಸಾರವು ನಾಟ ಗೃಹವು. ಪುರುಷರು ಬೊಂಬೆಗಳು. ಹೆಂಗಸರು ಶಕ್ತಿ ಸೌಂದರ್ಯವು ಮೋಹಪಾಶವು. ವಿಧಿಯು ಸೂತ್ರಧಾರನು. ಈ ಸೂತ್ರ ಧಾರನು ಸ್ತ್ರೀಸೌಂದರ್ಯವೆಂಬ ಮೋಹಪಾಶದ ಸಹಾಯದಿಂದ ಪುರು ರೆಂಬ ಬೊಂಬೆಗಳನ್ನು ತಮ್ಮ ಮನಸ್ಸು ಬಂದಂತೆ ಎಳೆದಾಡಿ ಪ್ರಪಂಚವೆಂ ನಾಟಕಶಾಲೆಯಲ್ಲಿ ನರ್ತನಮಾಡಿಸುವನು. ಪುರುಷರು ಮೋಹಪಾಶದಲ್ಲಿ ತೊಡಕಿಕೊಂಡು ಶಕ್ತಿಯ ಎಳೆದಾಟಕ್ಕೆ ಸಿಕ್ಕದೆ ಇದ್ದರೆ ಪ್ರಪಂಚ ಕಾರ್ಯಗಳು ನಿಂತುಹೋಗುವುವು. ಮತ್ತು ಕಾರ್ಯರಹಿತವಾದ ಪ್ರಪ ಚದ ಅಸ್ತಿತ್ವವೇ ಲೋಪವಾಗುವುದು. ಆದುದರಿಂದಲೇ ಸೃಷ್ಟಿಕರ್ತನ ಶಕ್ತಿರೂಪಿಣಿಯಾದ ಸ್ತ್ರೀಜಾತಿಯನ್ನು ರೂಪಯೌವನಗಳೆಂಬ ಅಜೇಯ ವಾದ ಮೋಹಿನೀಜಾಲದಿಂದ ಆವರಿಸಿಟ್ಟು ಪುರುಷನ ಆಕರ್ಷಣಕ್ಕೆ ಬಲವಾ ದೊಂದು ಸಾಧನವನ್ನು ಮಾಡಿಕೊಂಡಿರುವನು. ಆದುದರಿಂದ ಶಕ್ತಿರೂ ಣಿಯಾದ ಸ್ತ್ರೀಯು ಪ್ರಪಂಚದ ಮೂಲಾಧಾರವು. ಆ ಮೂಲಾಧಾರವಿ ದಿದ್ದರೆ ಸಂಸಾರವೇ ಇಲ್ಲ. ಎಂದರೆ ಸ್ತ್ರೀಯರ ಸರ್ವಸ್ವದ ಉತ್ಪತ್ತಿಗ ಪುರುಷರೆಂಬ ಪಕ್ಷಿಗಳನ್ನು ಹಿಡಿದಿಡುವ ಜಾಲದ ರಚನೆಯೇ ಧ್ಯೇಯವ ಆದುದರಿಂದ ಸತಿಯ ಶರೀರ, ಮನಸ್ಸು, ರೂಪ ಯೌವನಗಳು, ಒನ ಒಯ್ಯಾರಗಳು, ಸೊಬಗು ಸೌಂದರ್ಯಗಳು, ಅವಳ ಜಪತಪ ಹೋಮ ಹವನ ಪೂಜಾ ಸೇವೆಗಳು ಇವೆಲ್ಲ ಪತಿಗಾಗಿಯೇ; ಪತಿಯ ಚಿತ್ತವನ ಆಕರ್ಷಿಸಿಕೊಳ್ಳುವುದಕ್ಕಾಗಿಯೇ. ಆದುದರಿಂದ ಪತಿಯೊಬ್ಬನೇ ಸತಿಯ ಇಷ್ಟವಸ್ತು. ಸ್ತ್ರೀಜಾತಿಯು ಸದಾ ಪೂಜನೀಯವಾದ ಪತಿದೇವತೆಯ

ಯಾವ ಸ್ತ್ರೀಯು ಸೌಂದರ್ಯ ಸದ್ಗುಣಸದಾಚಾರಗಳ ಜಾಲದಲ್ಲಿ ತೊಡಕಿಕೊಳ್ಳದೆ ಅವಳನ್ನು ಅನಾದರ ಮಾಡುವನೋ ಅವಳ ವಸ್ತ್ರಾಲಂಕಾರ, ರೂಪಗುಣ, ಒನಪುಒಯ್ಯಾರ, ತಾರುಣ್ಯ, ಸೊಬಗು, ಸೌಂದರ್ಯ, ವಿಲಾಸ ಇವೆಲ್ಲ ವ್ಯರ್ಥ. ಅವಳು ಬದುಕಿದ್ದರೂ ಇಲ್ಲದ ಹಾಗೆಯೇ ಸರಿ. ಧಿಕ್ಕಾರ! ಧಿಕ್ಕಾರ! ಇಂತಹ ಸ್ತ್ರೀಜನ್ಮಕ್ಕೆ ಧಿಕ್ಕಾರ!

ಪಾರ್ವತೀದೇವಿಯು ತನ್ನ ಪ್ರಯತ್ನಗಳೆಲ್ಲ ವ್ಯರ್ಥವಾದುದನ್ನು ಕಂಡು ವಸ್ತ್ರಾಲಂಕಾರಗಳನ್ನೆಲ್ಲ ತೆಗೆದೊಗೆದು ತನ್ನ ರೂಪಯೌವನಗಳು ಅತಿಶಯ ಹೇಯವಾದವುಗಳೆಂದು ಭಾವಿಸಿ ಒಮ್ಮೆ ದುಃಖದಿಂದ ಕಣ್ಣೀರು ಸುರಿಸಿದಳು. ಮತ್ತು "ಈ ನನ್ನ ರೂಪಗುಣಗಳಿಗೂ ಯೌವನಸೌಂದರ್ಯಗಳಿಗೂ ಮೋಹಿತನಾಗದೆ ಇದ್ದ ಶಂಕರನು, ತನ್ನಂತೆಯೇ ಸರ್ವಸ್ವವನ್ನೂ ತ್ಯಜಿಸಿ ಸಂನ್ಯಾಸಿನಿಯಾಗಿ ತಪಶ್ಚರಣೆಗೈದು ಅಮೋಘವಾದ ಆಂತರಿಕ ಶಕ್ತಿಯ ಬಲದಿಂದ ಅಂತರಂಗವನ್ನು ಆಕರ್ಷಿಸಿದರೆ ಆಗಲಾದರೂ ನನ್ನ ಅಧೀನನಾಗಲಿಕ್ಕಿಲ್ಲವೇನು? ಸಾಮಾನ್ಯ ಸ್ತ್ರೀಯರಿಗಿರುವ ಸಾಧನಗಳು ಆತನನ್ನು ಆಕರ್ಷಿಸಲಾರದೆ ಇದ್ದರೂ ನನ್ನ ಅಮೋಘವಾದ ಆಂತರಿಕ ಶಕ್ತಿಯು ಕೂಡ ಆತನನ್ನು ಆಕರ್ಷಿಸಲಾರದೇನು? ತಪಃಪ್ರೀತನಾದ ತಪೋರತನಾದ ಶಂಕರನಿಗೆ ತಪಸ್ಸೇ ಪ್ರಿಯಕರವಾದುದಲ್ಲದೆ ಬಾಹ್ಯಾಂಗ ಸೌಂದರ್ಯವೂ ಸಾಮಾನ್ಯವಾದ ಪೂಜಾ ಸೇವೆ ಭಜನೆಗಳೂ ಆತನನ್ನು ಸಂತೋಷಪಡಿಸಲಾರವು. ಆದುದರಿಂದ ನಾನು ಸಂನ್ಯಾಸಿನಿಯಾಗಿ ತಪೋವನಕ್ಕೆ ತೆರಳಿ ನನ್ನ ಅತುಲವಾದ ತಪಃಪ್ರಭಾವದಿಂದಲೇ ಆತನನ್ನು ಒಲಿಸಿಕೊಳ್ಳುವೆನು." ಎಂದು ನಿಶ್ಚಯಿಸಿದಳು.

ಮಗಳು ತನ್ನ ಇಷ್ಟ ದೇವತೆಯ ಸಾಧನೆಗಾಗಿ ಇನ್ನಾವ ಮಾರ್ಗವನ್ನು ಅವಲಂಬಿಸುವಳೋ, ದೇವಾಧಿದೇವನಾದ ಮಹಾದೇವನು ಈ ರೀತಿ ಅನಾದರವನ್ನು ತೋರಿಸಿದುದರಿಂದ ಮನನೊಂದ ಪಾರ್ವತಿಯು ಮುಂದೇನು ಮಾಡುವಳೋ ಎಂದು ಮೇನಾದೇವಿಯೂ ಪರ್ವತರಾಜನೂ ಬಹುಪರಿಯಿಂದ ಚಿಂತಿಸುತ್ತಿದ್ದರು. ವಸ್ತ್ರಾಲಂಕಾರಗಳನ್ನು ತೆಗೆದೊಗೆದ, ಬಾಡಿದ್ದರೂ ಪ್ರಶಾಂತವಾಗಿರುವ ಮುಖಭಾವವುಳ್ಳ, ಪಾರ್ವತೀದೇವಿಯು ಅಕಸ್ಮಾತ್ತಾಗಿ ಬಂದು ತಂದೆತಾಯಿಗಳ ಪಾದಗಳಿಗೆರಗಿದಳು. ಮಗಳ ಈ

ತರದ ಅಸಮಾಧಾನಕರವಾದ ಸ್ಥಿತಿಯನ್ನು ಕಂಡು ಅವರಿಗೆ ಹೇಳಕೂಡದಷ
ದುಃಖವಾಯಿತು. ಮೇನಾದೇವಿಯು ಮಗಳನ್ನು ಎತ್ತಿ ಮುದ್ದಿಟ
ಕೊಂಡು ಆಕೆಯನ್ನು ಪರಿಪರಿಯಿಂದ ಸಮಾಧಾನಪಡಿಸಲು ಯತ್ನಿಸಿದಳ

ಪಾರ್ವತೀದೇವಿಯು ಈಗ ದುಃಖಿತಳಾದಂತೆ ತೋರುತ್ತಿರಲಿಲ್ಲ
ಅಭಿಮಾನಕ್ಕೆ ಭಂಗಬಂದುದರಿಂದ ಆಕೆಯ ಮನಸ್ಸಿನೊಳಗಿನ ಅಂತರಿ
ಶಕ್ತಿಗೆ ಆಘಾತವಾಗಿ ಅದು ಹಠಸಾಧನೆಯ ಮಾರ್ಗವನ್ನು ಅವಲಂಬ
ದ್ದಿತು. ಆತ್ಮವಿಶ್ವಾಸವುಳ್ಳವರ ಸ್ಥಿತಿಯೇ ಹೀಗೆ. ಕೈಸಾಗದ ಹೇಡಿಗಳ
ತಮ್ಮ 'ಇಷ್ಟಸಾಧನೆಗಾಗಿ ಏನಾದರೊಂದು ಉಪಾಯವನ್ನು ಅವಲಂಬಿಸಿ
ಬಳಿಕ ಅದರಲ್ಲಿ ಅವರಿಗೆ ಯಶಸ್ಸು ದೊರೆಯದೆ ಇರಲು ಗಳಗಳ ಅಳುವರು
ಅವರ ದುಃಖಕ್ಕೆ ಪಾರಾವಾರವಿರದು. ಆದರೆ ಶಕ್ತಿಶಾಲಿಗಳಾದವರು ಹಾಗ
ಎಂದೂ ಮಾಡರು. ಪಾರ್ವತೀದೇವಿಯು ತಾನು ಕೈಕೊಂಡಿರುವ ಒಂದು
ಮಾರ್ಗದಿಂದ ಪತಿದೇವನು ವಶನಾಗದಿರಲು ಅಷ್ಟು ಶ್ರಮವು ವ್ಯರ್ಥವಾದು
ದಕ್ಕಾಗಿ ಚಿಂತಾಕ್ರಾಂತಳಾದರೂ ಸ್ವಾಭಿಮಾನವನ್ನು ಕಳೆದುಕೊಂಡಿ
ಲಿಲ್ಲ; ಇಲ್ಲಿಗೇ ತನ್ನ ಶಕ್ತಿಯು ಕೊನೆಗಂಡಿತೆಂದು ಭಾವಿಸಿರಲಿಲ್ಲ. ಇದಲ್ಲ
ದಿದ್ದರೆ ಇನ್ನೊಂದು ಉಪಾಯದಿಂದಲಾದರೂ ಆತನ ಮನಸ್ಸನ್ನು ಜಯಿಸಿ
ತನ್ನ ವಶಮಾಡಿಕೊಳ್ಳುವೆನೆಂಬ ದೃಢವಾದ ಆತ್ಮವಿಶ್ವಾಸವು ಆಕೆಯ ಅಂತ
ರಂಗದಲ್ಲಿ ನಿಶ್ಚಲವಾಗಿದ್ದಿತು. ಆ ಆಂತರಿಕ ಭಾವನೆಯು ಆಕೆಯ ಮುಖ
ದಲ್ಲಿ ಸ್ಫುಟವಾಗಿ ಕಾಣಿಸುತ್ತಿದ್ದಿತು.

ಮೇನಾದೇವಿಯು ಬಹು ದುಃಖದಿಂದ ಮುಂದೇನು ಗತಿಯೆಂದೂ
ಭೂತನಾಥನು ಪ್ರೀತನಾಗುವುದಕ್ಕಾಗಿ ಯಾವ ಉಪಾಯವನ್ನು ಯೋಜಿ
ಸಬೇಕೆಂದೂ ಮಗಳನ್ನು ಕೇಳಿದಳಾದರೂ ಬಳಿಯಲ್ಲಿಯೇ ಇರುವ ಪತಿಯ
ಮುಖವನ್ನು ನೋಡಿ ನಾವೆಲ್ಲರೂ ಈ ಪ್ರಶ್ನೆಗೆ ಉತ್ತರವನ್ನು ಆಲೋಚಿಸ
ಬೇಕಾಗಿರುವುದೆಂಬ ಭಾವನೆಯನ್ನು ಪ್ರಕಟಿಸಿದಳು. ಪರ್ವತರಾಜನು
ಯಾವ ಉತ್ತರವೂ ತೋರದೆ ಇದ್ದುದರಿಂದ ಮನಸ್ಸು ಕುಂದಿದವನಾಗಿ
ಮುಖವನ್ನು ತಗ್ಗಿಸಿದನು. ಆದರೆ ಪಾರ್ವತೀದೇವಿಯು ಮಾತ್ರ ಬಳ್ಳಿ
ಧೀರತೆಯಿಂದ "ಅಮ್ಮಾ! ಈ ರೂಪ ಯೌವನಗಳೂ ವಸ್ತ್ರಾಲಂಕಾರಗಳೂ
ಆ ಭೋಳಾನಾಥನ ಮನಸ್ಸನ್ನು ಆಕರ್ಷಿಸಲಿಲ್ಲವೆಂದ ಮಾತ್ರಕ್ಕೆ ನೀವ

ಇಷ್ಟೇಕೆ ಹತಾಶರಾಗಿರುವಿರಿ? ಆತನ ಮನಸ್ಸನ್ನು ಒಲಿಸಿಕೊಳ್ಳಲು ಸಾಮಾನ್ಯ ಮಾನವಕುಲದ ಪ್ರಿಯಕರವಾದ ಈ ಸಾಧನಗಳು ತೀರ ಕ್ಷುಲ್ಲಕವಾದುವುಗಳು. ಅಮೋಘವಾದ ತಪೋಬಲವಿಲ್ಲದೆ ಆತನ ಅಂತರಂಗವನ್ನು ಹೊರಗೆ ಎಳೆದು ಆತನನ್ನು ವಶಪಡಿಸಿಕೊಳ್ಳುವುದು ಎಂದೂ ಸಾಧ್ಯವಾದ ಮಾತಲ್ಲ. ಆದುದರಿಂದ ಇಂದೇ ನಾನು ಹಿಮಾಲಯದೊಳಗಿನ ಅತ್ಯುನ್ನತವಾದೊಂದು ಶಿಖರಕ್ಕೆ ಹೋಗಿ ಅಲ್ಲಿ ತಪಸ್ಸನ್ನು ಆರಂಭಿಸಬೇಕೆಂದು ನಿಶ್ಚಯಿಸಿರುವೆನು. ಈಗ ಆ ವಿಚಾರವನ್ನು ಹೇಳುವುದಕ್ಕಾಗಿಯೇ ನಾನು ಇಲ್ಲಿಗೆ ಬಂದಿರುವೆನು. ಲೋಕದಲ್ಲಿ ಮಾನವಶಕ್ತಿಗೆ ಯಾವುದು ತಾನೇ ಅಸಾಧ್ಯವಾಗಿರುವುದು? ದೃಢವಾದ ಮನಸ್ಸೂ, ನಿಶ್ಚಲವಾದ ಭಕ್ತಿಯೂ ನಿಶ್ಚಿತವಾದ ಆತ್ಮವಿಶ್ವಾಸವೂ ಹಿಂದೆಗೆಯದ ಸಾಹಸವೂ ಸತತ ಪ್ರಯತ್ನವೂ ಇದ್ದರೆ ಲೋಕದಲ್ಲಿ ಅಸಾಧ್ಯ ಕಾರ್ಯಗಳು ಇಲ್ಲವೇ ಇಲ್ಲ. ಪ್ರಪಂಚದೊಳಗಿನ ಸಕಲಕಾರ್ಯಗಳೂ ಹೆಚ್ಚುಕಡಿಮೆ ಕಷ್ಟಸಾಧ್ಯವಾದವುಗಳೆಂದಬಳಿಕ ಶಂಕರನ ಮನಸ್ಸನ್ನು ಜಯಿಸಲು ನಾನು ಇಷ್ಟೇಕೆ ಚಿಂತೆಮಾಡಲಿ?'' ಎಂದಳು



ಮೇನಾದೇವಿಯು ಮಗಳ ಮಾತುಗಳನ್ನು ಕೇಳಿ ಬಹುಚಿಂತೆಗೊಳಗಾದಳು. ಮಗಳು ಸಂನ್ಯಾಸಿನಿಯಾಗಿ ವನವಾಸಿಯಾಗಿ ತನ್ನ ಕೋಮಲವಾದ ತನುವನ್ನು ಕಠೋರವಾದ ತಪಸ್ಸಿನಿಂದ ಕೊರಗಿಸುವಳೆಂಬ ವಿಚಾರವನ್ನು ಕೇಳಿದೊಡನೆಯೇ ಆಕೆಯ ಮನಸ್ಸು ಮರಮರನೆ ಮರುಗಿತು. ನಿಜವಾಗಿ ನೋಡಿದರೆ ಮೇನಾದೇವಿಯ ದುಃಖಕ್ಕೆ ಎಷ್ಟು ಮಾತ್ರವೂ ಕಾರಣವಿರಲಿಲ್ಲ. ಜಗಜ್ಜನನಿಯಾದ ಆದಿಮಾಯೆಯೇ ಪಾರ್ವತಿಯೆಂಬುದನ್ನು ಆಕೆ ಮೊದಲಿನಿಂದಲೂ ಅರಿತಿರುವಳು. ನಾರದರು ಮೊದಲೊಮ್ಮೆ ಸಕಲವನ್ನೂ ತಿಳಿಸಿರುವರು. ಅಂದಬಳಿಕ ಮೇನಾದೇವಿಯು ಮಗಳ ವಿಯೋಗಕ್ಕಾಗಿ ಕೊರಗಲೇಕೆ? ತಿಳಿದೂ ತಿಳಿಯದವರಂತೆ, ಕಂಡೂ ಕಾಣದವರಂತೆ ನಡೆಯುವುದು ಪ್ರಪಂಚದೊಳಗಿನ ಒಂದು ರಹಸ್ಯದ ಮಾತು. ಹುಟ್ಟಿದ ಮನುಷ್ಯನು ಸತ್ತೇಸಾಯುವನೆಂಬುದನ್ನು ಯಾರು ತಾನೇ ಅರಿಯರು? ಆದರೆ ತಮ್ಮ ಪ್ರೀತಿಯ ಜನರು ಮರಣಹೊಂದಲು ಅಳದೆ ಇರುವವರು ಎಷ್ಟು ಜನರು? ಈ ಲೋಕದೊಳಗಿನ ಪ್ರಾಪಂಚಿಕ ಸಿರಿಸಂಪತ್ತುಗಳು

ಅಸ್ಥಿರವಾದುವೆಂಬುದನ್ನು ಲೋಕಕ್ಕೆ ಉಪದೇಶಮಾಡುವ ಮಹರ್ಷಿಯರೆನಿ
ಕೊಳ್ಳುವವರು ಕೂಡ ಪೈಗೆ ಪೈ ಕೂಡಿಸಿ ಲೆಕ್ಕ ಮಾಡಿ ಧರ್ಮ ಕರ್ಮಗಳ
ನ್ನೆಲ್ಲ ಮರೆತು ನಡೆಯುವುದನ್ನು ಅಡಿಗಡಿಗೆ ಕಾಣಬಹುದಲ್ಲವೇ? ಕಳವ
ಕೊಲೆಸುಲಿಗೆ ಮುಂತಾದ ದುಷ್ಕೃತ್ಯಗಳ ಪರಿಣಾಮವು ಒಳ್ಳೆಯದಾಗಲಾ
ರದೆಂದು ತಿಳಿಯದೆಯೇ ಜನರು ಅವನ್ನು ಮಾಡುವರೆಂದು ಭಾವಿಸಬಹು
ದೇನು ? ಇದರಂತೆ ಉಳಿದ ವಿಚಾರಗಳು.

ಮೇನಾದೇವಿಗೆ ಮಗಳ ವಿಯೋಗವು ಬಹು ದುಃಖಕರವಾಗಿ
ತೋರಿತು. ಮಗಳು ತಪೋವನದಲ್ಲಿ ತಪಸ್ಸನ್ನಾಚರಿಸುವಾಗ ಅನುಭವಿಸ
ಬೇಕಾಗುವ ಕಷ್ಟಗಳು ಒಂದೊಂದಾಗಿ ಆಕೆಯ ಕಣ್ಣ ಮುಂದೆ ಕಟ್ಟಿದಂತಾ
ದುವು. ಉಪವನದಲ್ಲಿ ಸಂಚರಿಸುವಾಗ ಉಸುಕಿನ ಕಣಗಳು ಕೂಡ ನಡು
ವಷ್ಟು ಕೋಮಲವಾಗಿರುವ ಪಾದಗಳನ್ನು ಎತ್ತಿಕೊಂಡು ತಪೋವನದಲ್ಲಿ
ಮುಳ್ಳು ಕಲ್ಲುಗಳಿಂದ ತುಂಬಿದ ಕಠಿಣವಾದ ಮಾರ್ಗದಲ್ಲಿ ಮಗಳು ಹೇಗೆ
ಸಂಚರಿಸುವಳೆಂದು ಆಕೆ ಚಿಂತಿಸಿದಳು. ಅರಮನೆಯಲ್ಲಿ ಹಂಸಪಕ್ಷಿಯ
ತುಪ್ಪಳದ ಗಾದಿಯ ಮೇಲೆ ಮಲಗುವ ಮಗಳು ತಪೋವನದಲ್ಲಿ ಬಂಡೆ
ಗಲ್ಲಿನ ಮೇಲೆ ದರ್ಭಾಸನದಲ್ಲಿ ಹೇಗೆ ಪವಡಿಸುವಳೆಂದು ಆಕೆ ಹಂಬಲಿಸಿ
ಹಲುಬಿದಳು. ಹೊತ್ತುಹೊತ್ತಿಗೆ ಹಾಲನುಣಿಸಿ ಆರೈದು ಬೆಳಸಿದ ಮುದ್ದು
ಮಗುವನ್ನು ಅನ್ನಾಹಾರಗಳನ್ನು ತೊರೆದು ಕಷ್ಟಪಡುವುದಕ್ಕೆ ಅಡವಿಗೆ
ಹೇಗೆ ಕಳುಹಲೆಂದು ಮೇನಾದೇವಿಯು ಕಣ್ಣೀರು ಸುರಿಸಿದಳು.

ಆಹಾ! ಮಾತೆಯ ಮಮತೆಯೇ! ಧನ್ಯ! ಹಡೆದ ತಾಯಿಯ ಮಮ
ತೆಗೆ ಲೋಕದಲ್ಲಿ ಬೇರೊಂದು ಉಪಮೆಯೇ ಇಲ್ಲ. ತಾಯಿಯು ತನ್ನ
ಸರ್ವಸ್ವವನ್ನಾದರೂ ಕೊಟ್ಟು ಮಕ್ಕಳ ಸುಖವನ್ನು ಕಾಯುವಳು. ತಾನು
ಬಹುವಿಧದ ಕಷ್ಟಗಳನ್ನು ಅನುಭವಿಸುವಳು; ಬಹುವಿಧದ ಕೊರತೆಗ
ಳನ್ನು ಸಹಿಸಿಕೊಳ್ಳುವಳು; ಬಹುವಿಧದ ವಿಪತ್ತುಗಳನ್ನು ಇದಿರಿಸು
ವಳು: ಆದರೆ ತನ್ನ ಮಕ್ಕಳಿಗೆ ಎಳ್ಳಷ್ಟು ಕಷ್ಟವಾಗುವುದೆಂದರೂ ಅದು
ಅವಳಿಗೆ ಸಹನವಾಗದು. ಮೇನಾದೇವಿಯು ತಾನು ಹಿಂದಕ್ಕೆ ಬಹುಕಾಲ
ಉಗ್ರವಾದ ತಪಸ್ಸನ್ನು ಆಚರಿಸುವಾಗ ಯಾವರೀತಿಯಿಂದಲೂ ಕಷ್ಟವನ್ನು
ಕಲ್ಪಿಸಿಕೊಳ್ಳಲಿಲ್ಲ. ಆದರೆ ಮಗಳು ತಪೋವನಕ್ಕೆ ತೆರಳುವೆನೆಂದ ಕೂಡಲೆ

ಅವಳಿಗೆ ಹೇಳಕೂಡದಷ್ಟು ಕಷ್ಟವಾಯಿತು; ಮಗಳನ್ನು ಹಲವು ಪರಿಯಿಂದ ಉಪದೇಶಮಾಡಿದಳು:—"ತಂಗೀ, ನಿನಗೆ ಈ ಅರಮನೆಯಲ್ಲಿ ಯಾತರ ಕೊರತೆಯಿರುವುದು. ಕುಬೇರನಿಗೆ ಸರಿಯಾದ ಸಂಪತ್ತು ಇದೆ. ಇಂದ್ರನಿಗಿಂತಲೂ ಹೆಚ್ಚಾದ ಅಧಿಕಾರ ವೈಭವಗಳಿರುವುವು. ಬಯಸಿದ ಬಯಕೆಗಳನ್ನೆಲ್ಲ ಕ್ಷಣಾರ್ಧದಲ್ಲಿ ಪೂರೈಸಿಕೊಡಲು ಸಿದ್ಧರಾದ ಅನುಚರರಿದ್ದಾರೆ. ಆ ದೇವಾಧಿದೇವ ಮಹಾದೇವನನ್ನು ಮೆಚ್ಚಿಸುವುದಕ್ಕಾಗಿ ನಾವು ಮಾಡಲು ಸಾಧ್ಯವಿರುವಷ್ಟು ಯತ್ನಗಳನ್ನೆಲ್ಲ ಮಾಡಿದೆವು. ಭಕ್ತವತ್ಸಲನೆಂದು ವಿಖ್ಯಾತನಾದ ಆತನು ನಮ್ಮ ಮೇಲೆ ಇಷ್ಟೇಕೆ ಅನಾದರವನ್ನು ತೋರಿಸಿದನೋ ತಿಳಿಯದು. ಹೋಗಲಿ, ನಾವು ನಮ್ಮ ಕರ್ತವ್ಯವನ್ನು ಮಾಡಿದೆವು. ಅಂದ ಬಳಿಕ ನಮ್ಮಲ್ಲಿ ಯಾವ ರೀತಿಯಿಂದಲೂ ಅಪರಾಧವಿಲ್ಲ. ನಾವು ಇಲ್ಲಿಯೇ ಇದ್ದುಕೊಂಡು ಆತನನ್ನು ಆರಾಧಿಸಿದರೆ ಕಾಲಾಂತರದಲ್ಲಿ ಆತನು ಒಲಿದರೂ ಒಲಿಯಬಹುದು." ಎಷ್ಟು ರೀತಿಯಿಂದ ಸಮಾಧಾನಪಡಿಸಿದರೂ ತಾಯಿಯು ಸಮಾಧಾನ ಹೊಂದುವ ಲಕ್ಷಣ ತೋರಲಿಲ್ಲ. ಪಾರ್ವತೀದೇವಿಗೆ ಉಭಯ ಸಂಕಟವೊದಗಿತು. ಹೊತ್ತು ಹೆತ್ತು ಸಾಕಿ ಸಲಹಿ ಬೆಳೆಯಿಸಿದ ಮಾತೆಯ ಮನಸ್ಸನ್ನು ನೋಯಿಸುವುದು ಆಕೆಗೆ ಸರಿದೋರಲಿಲ್ಲ. ಹೀಗೆಂದು ಪತಿವಿರಹಿತೆಯಾಗಿ ಸತೀಧರ್ಮವನ್ನು ಮರೆತು ಸುಖಾಭಿಲಾಷೆಯಿಂದ ಅರಮನೆಯಲ್ಲಿ ಉಳಿಯುವ ಅಧರ್ಮಕಾರ್ಯವಂತೂ ಆಕೆಯಿಂದ ಎಂದೂ ಆಗದ ಮಾತು.

ಲೋಕದಲ್ಲಿ ಖಡ್ಗವನ್ನು ಹಿರಿದು ಇದಿರುಬಂದ ವೈರಿಯ ಸಂಗಡ ಕಾದಾಡಿ ಹಿಮ್ಮೆಟ್ಟಿಸಬಹುದು. ವಿದ್ಯಾಜ್ಞಾನಸಂಪನ್ನರಾದ ತರ್ಕಶಾಸ್ತ್ರಜ್ಞರ ಸಂಗಡ ವಾದನನ್ನು ಹೂಡಿ ಜಯಿಸಬಹುದು. ಆದರೆ ಅಂತರಂಗದ ಸದ್ಭಾವನೆಯಿಂದ ಪ್ರೇರಿತರಾದ ಜನರ ಮನಸ್ಸನ್ನು ನೋಯಿಸದೆ ಅವರನ್ನು ಸಮಾಧಾನಪಡಿಸಿ ಅವರ ಕೃತಿಗಳನ್ನು ತನಗೆ ಅನುಕೂಲವಾಗಿ ಮಾಡಿಕೊಳ್ಳುವುದು ಬಹುಕಷ್ಟಸಾಧ್ಯವಾದ ಮಾತು. ಅಂತಹ ಆತ್ಮೀಯರು ಉಳಿದ ಯಾವ ತರ್ಕವಿತರ್ಕಗಳನ್ನೂ ವಾದವಿವಾದಗಳನ್ನೂ ಕೇಳುತ್ತಿರುವುದಿಲ್ಲ. ತಮ್ಮ ವಿರುದ್ಧವಾದ ಮಾತು ತರ್ಕದಿಂದ ಸಿದ್ಧವಾಗುತ್ತಿದ್ದರೂ, ಅದು ಅಲ್ಲವೆಂದು ಅಲ್ಲಗಳೆಯಲಿಕ್ಕೆ ನ್ಯಾಯ್ಯಮಾರ್ಗದಿಂದ ಬಾಡದೆ ಇದ್ದರೂ, ಅದು

ಹೌದೆಂದು ಒಪ್ಪಿಕೊಳ್ಳುವುದು ಮಾತ್ರ ಅವರಿಂದಾಗದು. ಹೆಚ್ಚು ಮಾತಾ
ಮಾತಿಗೆ ಮಾತು ಹೊರಡದಂತೆ ಮಾಡಿದರೆ ಗಳಗಳ ಅತ್ತುಬಿಡುವರು. ವಿತಂ
ವಾದಿಗಳಾದ ತಾರ್ಕಿಕರು **“ಶೇಷಂ ಕೋಪೇನ ಪೂರಯೇತ್”**
ಎಂಬ ನ್ಯಾಯವನ್ನು ಅವಲಂಬಿಸುವಂತೆ ಇವರು ಏನೂ ಆಗದಿದ್ದರೆ ಅಳಲು
ತೊಡಗುವರು. ಇದೇ ರೀತಿ ಮೇನಾದೇವಿಯು ಮಗಳ ಯುಕ್ತಿ-ಪ್ರಯು
ಕ್ತಿಯ ಮಾತುಗಳಿಗೆ ತಕ್ಕ ಉತ್ತರವನ್ನು ಹೇಳಲಾರದೆ ಹೋದುದರಿಂದ ಅ
ಳನ್ನು ಎದೆಗವಚಿಕೊಂಡು ಗೋಳಿಟ್ಟು ಅಳಲು ತೊಡಗಿದಳು. ಮತ್ತು ಎಷ್ಟೆ
ಅನ್ಯಾಯವಾದರೂ ಆಗಲಿ ನಿನ್ನಂತಹ ಸುಕುಮಾರಾಂಗಿಯನ್ನು ಬಹು
ಕಷ್ಟಕರವಾದ ತಪೋವನಕ್ಕೆ ಕಳುಹಿ ಅಲ್ಲಿ ಉಗ್ರವಾದ ತಪಶ್ಚರಣೆಯಿಂ
ಬೆಂದು ಬೆಂಡಾಗುವುದನ್ನು ತಾನು ನೋಡಲಾರೆನೆಂದು ಹಟತೊಟ್ಟಳು.

ಜಗಜ್ಜನನಿ ಪಾರ್ವತೀದೇವಿಯ ಶಕ್ತಿಗೆ ಯಾವುದು ತಾನೇ ಅಸಾಧ್ಯ
ಸದ್ಭಾವನೆಗಳಿಂದ ಪ್ರೇರಿತರಾದ ಇಬ್ಬರಲ್ಲಿ ಯಾವುದಾದರೊಂದು ವಿಷಯ
ವನ್ನು ಕುರಿತು ಮತಭೇದವುಂಟಾಗಿದ್ದರೆ ಆ ಸಮಯದಲ್ಲಿ ಯಾರ ಅಂತ
ಶಕ್ತಿಯು ಪ್ರಬಲವಾಗಿರುವುದೋ ಅವರೇ ತಮ್ಮ ವಿರುದ್ಧಾಭಿಪ್ರಾಯ
ದವರ ಮನಸ್ಸನ್ನು ತಮ್ಮಂತೆ ತಿದ್ದಿಕೊಂಡು ವಿಜಯಿಗಳಾಗುವರೆಂಬುದ
ಸಿದ್ಧಾಂತವಾದ ಮಾತು. ಅದರಂತೆ ಕೊನೆಗೆ ಪಾರ್ವತೀದೇವಿಯೇ ತಾಯಿಯ
ಮನಸ್ಸನ್ನು ತಿದ್ದಿ ಸರಿಮಾಡಿಕೊಂಡು ತನ್ನ ಇಚ್ಛೆಯಂತೆ ನಡೆಯಲು ಆ
ಯಿಂದ ಅಪ್ಪಣೆಯನ್ನು ಪಡೆದುಕೊಂಡಳು.

ಪಾರ್ವತೀದೇವಿಯು ತನ್ನ ತಾಯಿಯನ್ನು ಕುರಿತು:—“ಅಮ್ಮಾ
ಸಕಲ ಧರ್ಮಗಳನ್ನೂ ಅರಿತಿರುವ ನೀನು ಹೀಗೇಕೆ ಅಧರ್ಮಾಚರಣೆಯ
ಮನಸ್ಸನ್ನು ತೊಡಗಿಸಿರುವೆ? ಹಿಂದೆ ನಾರದ ಮಹಾಮುನಿಗಳ ಉಪದೇ
ವನ್ನು ಕೇಳಿ ನೀವೇ ನನ್ನನ್ನು ಆ ದೇವಾಧಿದೇವ ಮಹಾದೇವನ ಕೈಗೆ ಅ
ಸಿರುವಿರಲ್ಲವೇ? ನಾನಂತೂ ಬಾಲ್ಯದಿಂದ ಆತನ ಪಾದಗಳಿಗೆ ನನ್ನ ಸರ್ವ
ವನ್ನೂ ಧಾರೆಯೆರೆದಿರುವೆನು, ಇಂತಿರುವಾಗ ನಾನು ಪತಿಯನ್ನು ಮರೆ
ಅರಮನೆಯ ಸುಖೋಪಭೋಗಗಳನ್ನು ಅನುಭವಿಸುತ್ತ ಕುಳಿತಿರುವೆನಾ
ಎಂತಹ ಅಧರ್ಮಾಚರಣೆ ಮಾಡಿದಂತಾಗುವುದು? ಆ ಮಹಾದೇವನು ಎ
ವನಾದರೂ ಆತನ ಸಹವಾಸವು ನನಗೆ ಎಷ್ಟು ಕಷ್ಟಕರವಾಗಿದ್ದರೂ ಆತ

ನನ್ನ ಸ್ವಾಮಿ. ಆತನೇ ನನ್ನ ಸರ್ವಸ್ವ, ಆತನೇ ನನ್ನ ಇಷ್ಟದೇವತೆ. ಆತನಿಲ್ಲದೆ ನನಗೆ ಗತಿಯಿಲ್ಲ. ಸ್ತ್ರೀಯು ಎಷ್ಟೇ ಸಂಪನ್ನೆಯಾಗಿದ್ದರೂ ಅಧಿಕಾರಶಾಲಿನಿಯಾಗಿದ್ದರೂ ತನ್ನ ಸ್ವಾಮಿಯ ದಾಸಾನುದಾಸಿ. ಅವಳು ಪತಿಯನ್ನು ನೆಳಲಿನಂತೆ ಅನುಸರಿಸಬೇಕು. ಬದುಕಿರುವಾಗಲೂ ಮರಣ ಹೊಂದಿದ ಮೇಲೆಯೂ ಅವಳು ಆತನ ಅನುಚರಳಾಗಿರಬೇಕು. ಇದೇ ನಿಜವಾದ ಧರ್ಮಾಚರಣೆ. ತಾಯಿಯಾದ ನೀನು ಇದನ್ನೆಲ್ಲ ಅರಿತಿದ್ದರೂ ಕೇವಲ ಮೋಹಕ್ಕೆ ಒಳಗಾಗಿ ನನಗೆ ಅಧರ್ಮಾಚರಣೆಯನ್ನು ಉಪದೇಶ ಮಾಡುವುದು ಸರಿಯೇನಮ್ಮಾ? ನೀನು ಇಷ್ಟೊಂದು ವ್ಯಸನಪಡಲು ಕಾರಣವೇನಿದೆ? ಲೋಕದಲ್ಲಿ ಪತಿವ್ರತೆಯರಿಗೆ ಯಾವ ಕಾರ್ಯವು ತಾನೇ ಅಸಾಧ್ಯ? ನನ್ನನ್ನು ಆಶೀರ್ವದಿಸಿ ಒಮ್ಮೆ ತಪೋವನಕ್ಕೆ ಕಳುಹಿ ಬಿಡು. ಕೆಲವು ದಿನಗಳಲ್ಲಿಯೇ ಅದರ ಸತ್ಪರಿಣಾಮವನ್ನು ಕಣ್ಣಾರೆ ಕಾಣುವೆಯಂತೆ'' ಎಂದು ಬಹು ವಿನಯದಿಂದ ವಿಜ್ಞಾಪಿಸಿಕೊಂಡಳು.

ಪಾರ್ವತೀದೇವಿಯ ಆಂತರಿಕ ಶಕ್ತಿಗೆ ಅಧೀನಳಾದ ಮೇನಾದೇವಿಯು ಮಗಳ ವಿಚಾರವನ್ನು ಸಮ್ಮತಿಸಿ ಅವಳನ್ನು ತಪೋವನಕ್ಕೆ ಹೋಗಿ ಬಾರೆಂದು ಆಶೀರ್ವದಿಸಿ ಕಳುಹಿದಳು.

ತಾಯಿಯಿಂದ ಅಪ್ಪಣೆಯನ್ನು ಪಡೆದುಕೊಂಡ ಪಾರ್ವತೀದೇವಿಗೆ ತಂದೆಯ ಅನುಮತಿಯನ್ನು ಪಡೆದುಕೊಳ್ಳುವುದು ಕಠಿಣವಾದ ಮಾತಾಗಲಿಲ್ಲ. ಆಕೆಯು ತಂದೆತಾಯಿಗಳ ಅಪ್ಪಣೆಯನ್ನು ಪಡೆದು ತಪೋವನಕ್ಕೆ ಹೊರಡುವಾಗ ಜೀವದ ಗೆಳತಿಯರಾದ ಜಯಾವಿಜಯೆಯರು ಬೇಡವೆಂದರೂ ಆಕೆಯನ್ನು ಅನುಸರಿಸಿದರು. ಆಕೆಯು ಗೆಳತಿಯರೊಂದಿಗೆ ಹಿಮಾಲಯದೊಳಗಿನ ಅತ್ಯುನ್ನತವಾದೊಂದು ಗಿರಿಶಿಖರದಲ್ಲಿ ಹೋಗಿ ತಪಸ್ಸನ್ನಾಚರಿಸಲು ತೊಡಗಿದಳು. ಆ ಶಿಖರಕ್ಕೆ ಇಂದಿಗೂ "ಗೌರೀಶೃಂಗ" ವೆಂದು ಹೆಸರು ಉಳಿದಿದೆ.



## ಎಂಟನೆಯ ಪರಿಚ್ಛೇದ.

# ತಪಶ್ಚರಣೆ





ತಿವ್ರತಾ ಶಿರೋಮಣಿಯಾದ ಪಾರ್ವತೀದೇವಿಯು ಜಯಾ ವಿಜಯೆಯರೆಂಬ ಸಖಿಯರೊಂದಿಗೆ ಗೌರೀಶೃಂಗವನ್ನು ಸೇ ಕಠಿಣವಾದ ತಪಸ್ಸನ್ನು ಆಚರಿಸಲು ತೊಡಗಿದಳು. ಜರತಾ ರಿಯ ಸೀರೆಕುಪ್ಪಸಗಳನ್ನು ಬಿಟ್ಟು ಹುರುಬರಕಾದ ನಾರಿನ ಬಟ್ಟೆ ಗಳನ್ನು ಉಟ್ಟುತೊಟ್ಟಳು. ರತ್ನಖಚಿತವಾದ ಬಂಗಾರದ ಬಳೆ ಮುತ್ತಿನ ಹಾರ ಇವುಗಳನ್ನು ತೆಗೆದೊಗೆದು ರುದ್ರಾಕ್ಷಿಯ ಅಲಂಕಾರಗಳನ್ನು ಆನಂ ದದಿಂದ ಧರಿಸಿದಳು. ಪುಷ್ಪಶಯ್ಯೆಯಲ್ಲಿ ಪವಡಿಸುವ ರಾಜಕುಮಾರಿಯು ಕಠಿಣವಾದ ಬಂಡೆಗಲ್ಲಿನ ಮೇಲೆ ತೋಳನ್ನೇ ತಲೆಗಿಂಬಾಗಿ ಇಟ್ಟುಕೊಂಡು ಮಲಗಲು ಸಿದ್ಧಳಾದಳು! ಹಡೆದ ತಾಯಿಯು ಮಕ್ಕಳನ್ನು ಹೊತ್ತು ಹೊತ್ತಿಗೆ ಹಾಲುಣಿಸಿ ಸಂರಕ್ಷಿಸುವಂತೆ ಪಾರ್ವತೀದೇವಿಯು ತನ್ನ ತಪೋ ವನದೊಳಗಿನ ಹೂವಿನ ಗಿಡಗಳನ್ನು ಪ್ರೀತಿಪೂರ್ವಕವಾಗಿ ನೀರೆರೆದು ಬ ಯಿಸತೊಡಗಿದಳು. ತಪೋವನದಲ್ಲಿ ಆಕಳು, ಚಿಗರಿ, ಮೊಲ, ನವಿಲು, ಗಿ ಮುಂತಾದ ಪಶುಪಕ್ಷಿಗಳನ್ನು ಸಾಕಿದಳು. ಅವುಗಳಿಗೆ ಹೊತ್ತುಹೊತ್ತಿ ತಾನೇ ಹುಲ್ಲು ನೀರು ಕಾಳುಕಡಿಗಳನ್ನು ಕೊಟ್ಟು ಕಾಪಾಡುವಳು.

ಸಂನ್ಯಾಸವ್ರತವನ್ನು ಸ್ವೀಕರಿಸಿದ ಪಾರ್ವತೀದೇವಿಯು ತನ್ನ ಹಿಂದಿ ಅರಮನೆಯೊಳಗಿನ ಸುಖಸಂಪದಗಳನ್ನೆಲ್ಲ ಮರೆತುಬಿಟ್ಟಳು; ತಾನು ರಾ ಕುಮಾರಿಯಾಗಿರದೆ ನಿಜವಾಗಿಯೂ ಒಬ್ಬ ಸಂನ್ಯಾಸಿನಿಯೆಂದು ಬಗೆದಳು ಆಕೆಯು ತಪೋವನಕ್ಕೆ ಬಂದಂದಿನಿಂದಲೂ ಪುನರ್ಜನ್ಮವನ್ನು ಪಡೆದಳೋ ಎನ್ನುವಷ್ಟು ಕಷ್ಟಸಹಿಷ್ಣುತೆ ಶಾಂತತೆ ಧೀರತೆಗಳನ್ನು ತೋರ್ಪಡಿಸ ವಳು; ತಪಸ್ವಿಗಳ ಬಹು ಕಠಿಣವಾದ ವಿಧಿನಿಯಮಗಳನ್ನು ನಿರಾಯಾಸವಾ ಪಾಲಿಸುವಳು.

ಪಾರ್ವತೀದೇವಿಯು ಪ್ರತಿನಿತ್ಯ ಪ್ರಭಾತಸಮಯದಲ್ಲಿ ಕಠಿನವಾದ ಶಿಲಾಶಯ್ಯೆಯನ್ನು ಬಿಟ್ಟು ಏಳುವಳು. ಹಿಮಾಲಯದ ಚಳಿಯನ್ನು ಎಷ್ಟು ಮಾತ್ರವೂ ಲೆಕ್ಕಿಸದೆ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಪರಮ ಪವಿತ್ರವಾದ ಗಂಗಾನದಿಯಲ್ಲಿ ಸ್ನಾನಮಾಡುವಳು. ಬಳಿಕ ಪೂಜಾಸಾಹಿತ್ಯಗಳನ್ನೆಲ್ಲ ತಾನೇ ಸಂಗ್ರಹಿಸಿಕೊಂಡು ಶಿವಪೂಜೆಯನ್ನು ಮಾಡುವಳು. ತರುವಾಯ ಹೋಮಹವನಾದಿ ನಿತ್ಯ ಕೃತ್ಯಗಳನ್ನು ನೆರವೇರಿಸುವಳು. ಆಮೇಲೆ ಆಸನಾರೂಢಳಾಗಿ ಚಿತ್ತೈಕಾಗ್ರತೆಯನ್ನು ಪಡೆದು ತನ್ನ ಇಷ್ಟದೇವತೆಯೊಡನೆ ತಲ್ಲೀನಳಾಗುವಳು. ಆಗ ಆಕೆಯ ಬಾಹ್ಯೇಂದ್ರಿಯಗಳು ತಮ್ಮ ವ್ಯವಹಾರವನ್ನು ನಿಲ್ಲಿಸಿಬಿಡುವುವು; ನೋಡುವವರಿಗೆ ನಿರ್ಜೀವವಾದ ಶಿಲಾಪ್ರತಿಮೆಯಂತೆ ತೋರುವಳು.

ಪಾರ್ವತೀದೇವಿಯು ಈ ರೀತಿ ಸಂಧ್ಯಾಕಾಲದವರೆಗೆ ಧ್ಯಾನಮಗ್ನಳಾಗಿದ್ದು ಬಳಿಕ ಎಚ್ಚತ್ತು ಪುನಃ ಸ್ನಾನಾದಿಗಳನ್ನು ಮಾಡಿ ಇಷ್ಟದೇವತೆಯ ಭಜನೆಯನ್ನು ಆರಂಭಿಸುವಳು. ಆ ಕಾಲದ ಆಕೆಯ ಸುಮಧುರವಾದ ಗಾಯನದ ಸ್ವರವು ವನವನಾಂತರಗಳಲ್ಲಿ ಮಾರ್ದನಿಗೊಂಡು ಅಲ್ಲಿರುವ ಪಶುಪಕ್ಷಿಗಳನ್ನೂ ಮುನಿಋಷಿಗಳನ್ನೂ ಆನಂದಪಡಿಸುವುದು. ಇಷ್ಟಾದ ಬಳಿಕ ತಾನು ಸಾಕಿದ ಪಶುಪಕ್ಷಿಗಳಿಗೆ ಆಹಾರವನ್ನು ನೀಡಿ ಅವನ್ನೆಲ್ಲ ಸಮಾಧಾನಪಡಿಸಿ ಕಳುಹಿ ತಾನು ತಕ್ಕ ಉಪಾಹಾರವನ್ನು ಸೇವಿಸಿ ಸಖಿಯರೊಡನೆ ಕಠಿನವಾದ ಶಿಲಾತಲದಲ್ಲಿ ಕುಳಿತು ನಾನಾ ಪುರಾಣಗಳ ಕಥೆಗಳನ್ನು ಹೇಳುವಳು. ಆ ಬಳಿಕ ಎಲ್ಲರೂ ಮಲಗಿಕೊಳ್ಳುವರು. ಪಾರ್ವತೀದೇವಿಯ ಸಹವಾಸದಿಂದ ಆಕೆಯ ಸಖಿಯರಲ್ಲಿಯೂ ಅಮೋಘವಾದ ಶಿವಭಕ್ತಿಪರಾಯಣತೆಯು ತಲೆದೋರಿತು.

ಹೀಗೆಯೇ ಅನೇಕ ದಿನಗಳು ಕಳೆದುವು. ಒಂದು ಋತುವು ಹೋಗಿ ಮತ್ತೊಂದು ಋತುವು ಬಂದು ತನ್ನ ಹೊಸ ಅಲಂಕಾರಗಳಿಂದ ಭೂದೇವಿಯನ್ನು ಸಿಂಗರಿಸಿ ಕೆಲಕಾಲವಿದ್ದು ತಾನೂ ಹೊರಟುಹೋಯಿತು. ಹೀಗೆಯೇ ಎಷ್ಟೋ ಋತುಗಳೂ ವರ್ಷಗಳೂ ಕಳೆದುಹೋದುವು. ಪಾರ್ವತೀದೇವಿಯು ನಿಶ್ಚಲವಾದ ತನ್ನ ತಪಸ್ಸಾಧನೆಯನ್ನು ನಿಶ್ಚಿಂತಭಾವದಿಂದ ನಿರಂತರವಾಗಿ ನಡೆಯಿಸಿದಳು. ಇದನ್ನು ಕಂಡು ನೆರೆಯಲ್ಲಿರುವ ಋಷಿಗಳು

"ಇಂತಹ ಮಹಾಮಹಿಮಳೂ ಮಹಾಶಕ್ತಿಶಾಲಿನಿಯೂ ಆದ ದೇವಿಯ ಮೂರ್ತಿಯಂತಿರುವ ಸಂನ್ಯಾಸಿನಿಯು ಯಾರಿವಳು ?" ಎಂದು ಕುತೂಹ ಭಕ್ತಿಭಾವಗಳೊಡನೆ ವಿಚಾರಿಸತೊಡಗಿದರು.

ಹೀಗೆಯೇ ದಿವಸಾನುದಿವಸಗಳು ಕಳೆಯುತ್ತಿರಲು ಬೇಸಗೆಯ ಕಾಲವು ಬಂದಿತು. ಉಗ್ರವಾದ ಸೂರ್ಯನ ಕಿರಣಗಳಿಂದ ಭೂದೇವಿಯ ಬೆವರು ಸುರಿಸುವಳೋ ಎಂಬಂತೆ ಹಿಮಾಲಯದ ಹಿಮರಾಶಿಯೆಲ್ಲ ಕರ ನೀರಾಗಿ ಹರಿದು ನದಿಗಳಿಗೆ ಮಹಾಪೂರವು ಬಂದಿತು. ಪ್ರಖರವಾದ ಬ ಲಿನ ತಾಪವು ಹೆಚ್ಚುತ್ತ ನಡೆಯಿತು. ತಪಸ್ವಿನಿಯಾದ ಪಾರ್ವತೀದೇವಿಯ ಹೂಮಾಲೆಯಂತಿರುವ ತನ್ನ ಶರೀರವನ್ನು ಆ ಬೇಸಗೆಯ ಬಿಸಿಲಿಗೆ ತೆರೆದಿಟ್ಟ ಉಗ್ರವಾದ ತಪಸ್ಸು ನಡೆಯಿಸಿದ್ದಳು. ಅಡವಿಯ ವೃಕ್ಷಗಳು ಯಾರನ್ ಯಾವುದನ್ನೂ ಯಾಚಿಸದೆ ಈಶ್ವರನು ದಯೆಯಿಂದ ಸುರಿಸಿದ ಮಳೆಯ ನೀ ನ್ನುಂಡು ಸೂರ್ಯ ಚಂದ್ರರ ಕಿರಣಗಳಿಂದಲೇ ತಮ್ಮ ಜೀವನವನ್ನು ಸಾ ಸುವುವು. ಇದಕ್ಕೆ "ತರುವೃತ್ತಿ" ಯೆನ್ನುವರು. ಪಾರ್ವತೀದೇವಿಯ ಈ ಬೇಸಗೆಯಲ್ಲಿ ತರುವೃತ್ತಿಯನ್ನವಲಂಬಿಸಿ ಗಂಗೆಯ ನೀರು, ವಾಯ ಸೂರ್ಯಚಂದ್ರರ ಕಿರಣಗಳು ಇಷ್ಟರಿಂದಲೇ ತನ್ನ ಜೀವನವನ್ನು ಸಾಗಿ ಕಠಿನವಾದ ತಪಸ್ಸನ್ನು ನಡೆಯಿಸಿದಳು.

ಬೇಸಗೆಯು ಹೋಗುವುದೂ ಮಳೆಗಾಲವು ಬಂದಿತು. ಬೇಸಗೆಯ ಬಿಸಿಲಿನಂತೆ ಮಳೆಗಾಲದ ಮಳೆಗೆ ಕೂಡ ಪಾರ್ವತೀದೇವಿಯು ಮೈಯೊಡ್ಡಿ ಆಸನಾರೂಢಳಾಗಿ ಸಮಾಧಿಯನ್ನು ನಡೆಯಿಸಿದಳು. ನಿರ್ಜೀವವಾದ ಶಿಲಾಪ್ರತಿಮೆಯು ಆಕಾಶದಿಂದ ಸುರಿಯುವ ಬಿರುಮಳೆ ಬಿರುಗಾಳಿಗಳನ್ನು ನಿಶ್ಚಲಭಾವದಿಂದ ಸಹಿಸುವಂತೆ ಪಾರ್ವತೀದೇವಿಯು ಅವನ್ನೆಲ್ಲ ಆನಂದದಿಂ ಸಹಿಸಿ ತಪಸ್ಸನ್ನು ನಡೆಯಿಸಿದಳು.

ಚಂಚಲವಾದ ಪ್ರಕೃತಿಯ ನಾನಾವಿಧದ ಅತ್ಯಾಚಾರಗಳನ್ನೆಲ್ಲ ಸಮ ಧಾನದಿಂದ ಸಹಿಸಿ ತನ್ನ ಶರೀರವನ್ನು ಪರಿಪರಿಯಿಂದ ದಂಡಿಸಿ ಇಂದ್ರಿಯ ಸ್ಥಿರತೆಯನ್ನೂ ಮನಃಶಾಂತಿಯನ್ನೂ ಶಂಕರನ ಶಕ್ತಿಯೊಡನೆ ಏಕೀಭಾ ವನ್ನೂ ಪಡೆಯುತ್ತ ನಡೆದಿರುವ ಪಾರ್ವತೀದೇವಿಯ ಆಂತರಿಕ ಶಕ್ತಿಯ ದಿನದಿನಕ್ಕೆ ಬೆಳೆಯುತ್ತ ನಡೆಯಿತು. ಹಿಮಾಲಯದ ಚಳಿಗಾಲದ ಚಳಿಯ

ರಾತ್ರಿಯಲ್ಲಿ ಪಾರ್ವತೀದೇವಿಯು ಸರೋವರದಲ್ಲಿಳಿದು ಶರೀರವನ್ನು ಕಂಠದ ವರೆಗೆ ನೀರಿನಲ್ಲಿ ಮುಳುಗಿಸಿ ನಿಂತು ಶಿವಧ್ಯಾನವನ್ನು ಮಾಡುವಳು; ಮೇಲೆ ಮಂಜು ಮುಸುಕಿರುವುದು. ಆಕೆಯ ಇಂದ್ರಿಯಗಳು ಇಂತಹ ಚಳಿಯಿಂದಲೂ ಯಾವ ತರದ ಚಾಂಚಲ್ಯವನ್ನೂ ಹೊಂದದಷ್ಟು ಸ್ಥೈರ್ಯವನ್ನು ಪಡೆದಿದ್ದುವು.

ಋತುವು ಬದಲಾಗುವಾಗ ತಾವಾಗಿ ಉದಿರಿ ಬೀಳುವ ಎಲೆಗಳನ್ನಷ್ಟೇ ತಿಂದು ಜೀವಿಸಿ ತಪಸ್ಸನ್ನು ಮಾಡುವುದು ತಪಸ್ಸಿನ ನಿಯಮಗಳಲ್ಲಿ ಕೊನೆಯದೂ ಕಠಿನತಮವೂ ಆದುದೆಂದು ಹೇಳುವರು. ಆದರೆ ಪಾರ್ವತೀದೇವಿಯು ಬರಬರುತ್ತ ಅದನ್ನು ಕೂಡ ಗ್ರಹಿಸದೆ ಕೇವಲ ವಾಯುವೊಂದನ್ನೇ ಸೇವಿಸಿ ತಪಸ್ಸನ್ನು ಆಚರಿಸತೊಡಗಿದಳು. ಆದುದರಿಂದ ಆಕೆಗೆ " **ಅಪರ್ಣೆ** " ಯೆಂದು ಹೆಸರು ಬಂದಿತು.

ಮಾನವನ ಶಕ್ತಿಗೆ ಸಾಧ್ಯವಾಗದಿರುವ ಕಾರ್ಯವು ಯಾವುದೂ ಇಲ್ಲ. ಮನಸ್ಸಿನ ಸ್ಥಿರತೆ, ದೃಢವಿಶ್ವಾಸ, ಸತತ ಪ್ರಯತ್ನ ಇವು ಇದ್ದರೆ ಸರ್ವವೂ ಸಾಧಿಸುವುವು. ರಾಜಕುಮಾರಿಯಾದ ಪಾರ್ವತೀದೇವಿಯು ಇಂತಹ ಅಮೋಘವಾದ ಶಕ್ತಿಯನ್ನು ಪಡೆಯಲು ಇವೇ ಕಾರಣವಾದುವು.

ಈ ಬಗೆಯಾಗಿ ಪಾರ್ವತೀದೇವಿಯು ತಪಸ್ಸನ್ನಾಚರಿಸುತ್ತಿರಲು ಹೆಚ್ಚು ಹೆಚ್ಚು ಕಾಲವು ಸಲ್ಲುತ್ತ ನಡೆದಂತೆ ಆಕೆಯ ಮನಸ್ಸಿನ ಶಕ್ತಿಯೂ ದೃಢತೆಯೂ ಏಕಾಗ್ರತೆಯೂ ಶರೀರದ ಕಷ್ಟಸಹಿಷ್ಣುತೆಯೂ ಹೆಚ್ಚುತ್ತ ನಡೆದುವು. ಸುವರ್ಣವನ್ನು ಕಾಸುತ್ತ ನಡೆದಂತೆ ಅದರೊಳಗಿನ ಕಲ್ಮಷಗಳು ಸುಟ್ಟು ಹೋಗಿ ಅದರ ಬಣ್ಣವು ಪ್ರಜ್ವಲಿಸುತ್ತ ಹೋಗುವಂತೆ ಅಪ್ರತಿಮವಾದ ತಪಃಪ್ರಭಾವದಿಂದ ಪಾರ್ವತೀದೇವಿಯ ದೇಹಕಾಂತಿಯೂ ತೇಜಸ್ವಿತೆಯೂ ಹೆಚ್ಚುತ್ತ ನಡೆದುವು. ಇದೇ ರೀತಿ ಗೌರಾಂಗಿಯಾದ ಗೌರಿಯು ಗೌರೀಶೃಂಗದಲ್ಲಿರುವ ಸಕಲ ಪ್ರಾಣಿಗಳ ಚಿತ್ತವನ್ನೂ ಆಕರ್ಷಿಸಿಕೊಂಡು ವಿರಾಜಿಸುತ್ತಿದ್ದಳು. ಅವೆಲ್ಲ ಪಾರ್ವತೀದೇವಿಯು ತಮ್ಮ ತಾಯಿಯೆಂದು ಭಾವಿಸಿ ಆಕೆಯಲ್ಲಿ ಅತುಲವಾದ ಮಾತೃಸ್ನೇಹವನ್ನು ತೋರ್ಪಡಿಸುತ್ತಿದ್ದುವು. ಇದರಿಂದಲೇ ಆಕೆಗೆ ತಪೋವನವು ಎಷ್ಟುಮಾತ್ರವೂ ಕಷ್ಟಕರವಾಗದೆ ಸಕಲ ರೀತಿಯಿಂದಲೂ ಆನಂದಕರವೇ ಆಗಿದ್ದಿತು. ಆದರೆ ಪರ್ವತ

ರಾಜನಿಗೂ ಮೇನಾದೇವಿಗೂ ಮಾತ್ರ ಮನಸ್ಸಿನಲ್ಲಿ ಎಷ್ಟು ಮಾತ್ರವೂ ಶಾಂತಿಯಿರಲಿಲ್ಲ. ಮಗಳನ್ನು ಎಂದು ತಪೋವನಕ್ಕೆ ಕಳುಹಿದರೋ ಅಂದಿನಿಂದ ಅವರು ಬಹು ದುಃಖದಿಂದ ಬಳಲುತ್ತಿದ್ದರು. ಅವರಿಗೆ ಅರಮನೆಯು ಕಷ್ಟಕರವಾಗಿದ್ದಿತು; ಹಗಲಿರುಳು ದುಃಖದಿಂದ ಕಣ್ಣೀರು ಸುರಿಸುತ್ತಿದ್ದರು. ಇದೀಗ ಸಂಸಾರದ ವಿಚಿತ್ರವಾದ ಲಕ್ಷಣ. ಯಾವ ತಪೋವನವಾಸವು ಮಗಳಿಗೆ ಕಷ್ಟಕರವೆಂಬ ಭಾವನೆಯಿಂದ ಪರ್ವತರಾಜನೂ ಮೇನಾದೇವಿಯೂ ಹಗಲಿರುಳು ಅಸುಖಿಗಳಾಗಿದ್ದರೋ ಅದು ಪಾರ್ವತೀದೇವಿಗೆ ನಿಜವಾಗಿ ಅತ್ಯಂತ ಆನಂದಕರವಾಗಿದ್ದಿತು.

ಒಂದು ದಿನ ಸಂಧ್ಯಾಸಮಯದಲ್ಲಿ ಪಾರ್ವತೀದೇವಿಯು ನಿತ್ಯದಂತೆ ತನ್ನ ಗೆಳತಿಯರೊಂದಿಗೆ ತಾನು ಸಾಕಿದ ಪಶುಪಕ್ಷಿಗಳನ್ನು ನೋಡುತ್ತ ಅವುಗಳಿಗೆ ಆಹಾರವನ್ನು ಹಾಕುತ್ತ ತಪೋವನದಲ್ಲಿ ಸಂಚರಿಸುತ್ತಲಿದ್ದಳು. ಅಷ್ಟರಲ್ಲಿ ಅಕಸ್ಮಾತ್ತಾಗಿ ತಪೋವನದ ಗಡಿಯಲ್ಲಿ "ಜಯಶಂಕರ! ಜಯಶಂಕರ!" ಎಂಬ ಮನಸ್ಸಿನ ಉಲ್ಲಾಸವನ್ನೂ ಭಕ್ತಿಭಾವವನ್ನೂ ಬೀರುತ್ತಿರುವ ಉದ್ಗಾರಗಳ ಧ್ವನಿ ಕೇಳಬಂದಿತು. ಅತಿಥಿ ವತ್ಸಲಳಾದ ದೇವಿಯೂ ಆಕೆಯ ಗೆಳತಿಯರೂ ಆಶ್ಚರ್ಯಚಕಿತರಾಗಿ ಆ ಕಡೆಗೆ ದಿಟ್ಟಿಸಿ ನೋಡಿ ಪ್ರತಿಕ್ಷಣದಲ್ಲಿಯೇ ಅತಿಥಿಯನ್ನು ಇದಿರ್ಗೊಂಡು ಕರೆತರುವುದಕ್ಕಾಗಿ ಅಲ್ಲಿಗೆ ನಡೆದರು. ಇದಿರಿಗೆ ಅತಿ ತೇಜಃಶಾಲಿಯಾದ ಬ್ರಹ್ಮಚಾರಿಯೊಬ್ಬನು ಕೈಗಳಲ್ಲಿಯೂ ಕೊರಳಲ್ಲಿಯೂ ರುದ್ರಾಕ್ಷಮಾಲೆಗಳನ್ನು ಧರಿಸಿಕೊಂಡು ಹಣೆಯಲ್ಲಿ ವಿಭೂತಿಯನ್ನಿಟ್ಟು ನಾಲ್ದೆಸೆಗೂ ಉಜ್ವಲವಾದ ಕಾಂತಿಯನ್ನು ಬೀರುತ್ತ ಗಂಭೀರಭಾವದಿಂದ ತಪೋವನದ ಒಳಗೆ ಬರುತ್ತಲಿದ್ದನು. ಅತಿಥಿಪ್ರಿಯಳಾದ ಪಾರ್ವತೀದೇವಿಯು ಪರಮ ಶಿವಭಕ್ತನಾಗಿ ತೋರುವ ಆ ಬ್ರಹ್ಮಚಾರಿಯನ್ನು ಕಂಡು ಅತ್ಯಾನಂದದಿಂದ ತನ್ನ ಪರ್ಣಕುಟೀರಕ್ಕೆ ಕರೆದುಕೊಂಡು ಬಂದು ಯಥಾರೀತಿ ಸತ್ಕರಿಸಿ ಕುಳ್ಳಿರಿಸಿದಳು.

ಪಾರ್ವತೀದೇವಿಯು ತಪೋವನಕ್ಕೆ ಬಂದು ಉಗ್ರವಾದ ತಪಸ್ಸನ್ನು ಆರಂಭಿಸಿದಂದಿನಿಂದಲೂ ದಿನಾಲು ಅನೇಕ ಬ್ರಹ್ಮಚಾರಿಗಳೂ ಮುನಿಋಷಿಗಳೂ ಆಕೆಯ ದರ್ಶನಕ್ಕಾಗಿಯೂ ಕ್ಷೇಮಸಮಾಚಾರವನ್ನು ತಿಳಿದುಕೊಳ್ಳುವುದಕ್ಕಾಗಿಯೂ ಪುರಾಣಪುಣ್ಯಕಥೆಗಳನ್ನು ಕೇಳುವುದಕ್ಕಾಗಿಯೂ

ಅಲ್ಲಿಗೆ ಬರುತ್ತಿದ್ದರು. ಆದುದರಿಂದ ಬ್ರಹ್ಮಚಾರಿಯ ಆಗಮನದಿಂದ ದೇವಿಯಾಗಲಿ ಆಕೆಯ ಗೆಳತಿಯರಾಗಲಿ ವಿಶೇಷ ಆಶ್ಚರ್ಯಪಡುವ ಇಲ್ಲವೆ ವಿಚಾರಮಾಡುವ ಕಾರಣವಿರಲಿಲ್ಲ. ಅವರು ನಿತ್ಯದಂತೆ ಯಥಾರೀತಿಯಾಗಿ ಅತಿಥಿ ಸತ್ಕಾರವನ್ನು ನೆರವೇರಿಸಿದ ಬಳಿಕ ತಮ್ಮ ದಿನದ ಅನುಷ್ಠಾನಗಳನ್ನು ಕೈಕೊಂಡರು. ತಪೋವನ, ಪರ್ಣಕುಟೀರ, ಅಲ್ಲಿರುವ ಪಶುಪಕ್ಷಿಗಳು, ದೇವಿಯ ಗೆಳತಿಯರು, ತಪಸ್ವಿನಿಯ ವೇಷದಿಂದಿರುವ ದೇವಿ ಇವರನ್ನೆಲ್ಲ ಬ್ರಹ್ಮಚಾರಿಯು ಮೊದಲಿನಿಂದಲೂ ತುಂಬ ಕುತೂಹಲ ಪೂರ್ಣವಾದ ದೃಷ್ಟಿಯಿಂದ ನಿರೀಕ್ಷಿಸುತ್ತಿದ್ದನು. ಮತ್ತು ಅವರ ನಿರೀಕ್ಷಣೆಯಿಂದ ಆತನ ಮನಸ್ಸಿನಲ್ಲಿ ಹುಟ್ಟುವ ಆನಂದ ತರಂಗಗಳು ಮುಖದಲ್ಲಿ ಅಡಿಗಡಿಗೆ ಸ್ಪಷ್ಟವಾಗಿ ಕಾಣಿಸುತ್ತಿದ್ದುವು. ದೇವಿಯೂ ಜಯಾವಿಜಯೆಯರೂ ಇದನ್ನು ಅರಿತಿದ್ದರು.

ಸ್ವಲ್ಪ ಹೊತ್ತಾದ ಬಳಿಕ ಬ್ರಹ್ಮಚಾರಿಯು ಮೆಲ್ಲನೆ ಮಾತು ತೆಗೆದು ದೇವಿಯ ಕುಲಗೋತ್ರಗಳನ್ನೂ ಆಕೆಯ ಕುಟುಂಬದವರನ್ನೂ ವಿಚಾರಿಸತೊಡಗಿದನು. ನಿರ್ವಿಕಾರಚಿತ್ತಳೂ ಅತಿಥಿಯ ಮನಸ್ಸನ್ನು ಸಂತೋಷಪಡಿಸುವುದು ತನ್ನ ಕರ್ತವ್ಯವೆಂದು ಭಾವಿಸಿಕೊಂಡವಳೂ ಆದ ಪಾರ್ವತೀದೇವಿಯು ತನ್ನ ಸಂಬಂಧವಾಗಿ ಆತನು ಕೇಳುವ ಎಲ್ಲ ಪ್ರಶ್ನೆಗಳಿಗೆ ವಿನಯದಿಂದ ಸಮರ್ಪಕವಾಗಿ ಉತ್ತರ ಕೊಟ್ಟಳು. ಕೊನೆಗೆ ಬ್ರಹ್ಮಚಾರಿಯು:—ದೇವೀ, ನೀನು ರಾಜಾಧಿರಾಜ ಪರ್ವತರಾಜನ ಮಗಳಾಗಿ ಸಕಲೈಶ್ವರ್ಯದಿಂದ ಒಪ್ಪುತ್ತಿರುವ ಅರಮನೆಯ ಸುಖಾವಾಸವನ್ನು ತೊರೆದು ಇಂತಹ ಕಷ್ಟಕರವಾದ ತಪೋವನವಾಸವನ್ನು ಬಯಸಿದುದನ್ನು ಕಂಡು ನನಗೆ ಬಹು ದುಃಖವಾಗುವುದು. ಕುಸುಮ ಕೋಮಲೆಯಾದ ನೀನು ಇಂತಹ ಉಗ್ರವಾದ ತಪಸ್ಸನ್ನಾಚರಿಸಲು ಕಾರಣವೇನು ? ಅನುರೂಪನಾದ ಪತಿಯೊಡನೆ ಮದುವೆಯಾಗಿ ಸುಖದಿಂದ ಸಂಸಾರ ಮಾಡಲು ತಕ್ಕದ್ದಾಗಿರುವ ಈ ತಾರುಣ್ಯದ ಭರದಲ್ಲಿ ಮುದುಕರಿಗೆ ತಕ್ಕುದಾದ ಚತುರ್ಥಾಶ್ರಮವನ್ನು ಅವಲಂಬಿಸಲು ಕಾರಣವೇನಾಯಿತು ? ಯಾವ ಇಷ್ಟ ಸಾಧನೆಗಾಗಿ ಇಷ್ಟು ಉಗ್ರವಾದ ತಪಸ್ಸನ್ನು ಆಚರಿಸುತ್ತಿರುವೆ ?" ಎಂದು ತುಂಬ ಸಹಾನುಭೂತಿಯನ್ನು ತೋರ್ಪಡಿಸುತ್ತ ಪ್ರಶ್ನೆ ಮಾಡಿದನು.

ಪಾರ್ವತೀದೇವಿಯು ಈ ಪ್ರಶ್ನೆಗೆ ತಾನೇ ಉತ್ತರವನ್ನು ಹೇಳದೆ ಬಳಿಯಲ್ಲಿರುವ ಸಖಿಯರ ಮುಖವನ್ನು ನೋಡಲು ಅವರು ಆಕೆಯ ತಪಶ್ಚ ರ್ಯೆಗೆ ಕಾರಣವೇನೆಂಬುದನ್ನು ಸವಿಸ್ತರವಾಗಿ ಹೇಳಿದರು.

ಸಖಿಯರು ಹೇಳಿದ ಮಾತುಗಳನ್ನು ಕೇಳಿ ಬ್ರಹ್ಮಚಾರಿಯು ಮನಸ್ಸಿ ನಲ್ಲಿ ಅತಿಶಯ ಆನಂದವಾದರೂ ಹೊರಗೆ ತುಂಬ ವ್ಯಸನವನ್ನು ಪ್ರಕಟಿಸಿ ದನು. ಆತನ ಆ ಕಾಲದ ಮುಖಭಾವವನ್ನು ನೋಡುವವರಿಗೆ ಪಾರ್ವತೀ ದೇವಿಯು ಈ ಕಾರ್ಯಕ್ಕಾಗಿ ತಪಸ್ಸನ್ನು ಆಚರಿಸತೊಡಗಿ ವ್ಯರ್ಥವಾಗಿ ಇಷ್ಟೊಂದು ಕಷ್ಟಪಟ್ಟಳೆಂಬ ಭಾವವು ಸ್ಪಷ್ಟವಾಗಿ ಕಾಣಿಸುತ್ತಿದ್ದಿತು. ಆತನು:—“ ಶುಭಾಂಗಿಯೇ, ಸೃಷ್ಟಿಕರ್ತನಾದ ಬ್ರಹ್ಮನ ಕುಲದಲ್ಲಿ ಅತುಲ ಸಿರಿಸಂಪದಗಳಿಂದ ಒಪ್ಪುತ್ತಿರುವ ಪರ್ವತರಾಜನ ಮಗಳಾಗಿ ಜನಿಸಿ ಇಂತಹ ಕಷ್ಟಕಾರ್ಯವನ್ನು ಕೈಕೊಂಡುದೇ ಸರಿಯಾದ ಜಾಣತನದ ಮಾತಲ್ಲ. ಮೇಲಾಗಿ ಇಂತಹ ತೀರ ಅಯೋಗ್ಯವಾದ ಕಾರ್ಯಕ್ಕಾಗಿ ಇಷ್ಟು ಕಠೋ ರವಾದ ತಪಸ್ಸನ್ನು ಕೈಕೊಂಡಿರುವೆಯೆಂಬುದನ್ನು ಕೇಳಿದುದರಿಂದಂತೂ ನನಗೆ ಹೇಳಲಾರದಷ್ಟು ವ್ಯಸನವಾಗುವುದು. ”

“ ನಿನ್ನ ತಂದೆಯ ರಾಜ್ಯದಲ್ಲಿ ಇಲ್ಲದ ಸುಖಸಂಪತ್ತುಗಳು ಲೋಕ ದಲ್ಲಿಲ್ಲ. ನಿನ್ನ ಸ್ಥಿತಿಗತಿಗಳನ್ನು ಕಂಡು ನಿನ್ನ ಆ ಸರಳವೂ ಸುಯೋಗ್ಯವೂ ಆದ ಆಚರಣೆಯನ್ನು ನೋಡಿ ನನಗೆ ತುಂಬ ಸಂತೋಷವಾಯಿತು. ಆದು ದರಿಂದಲೇ ನಾನು ನಿನಗೆ ಒಂದೆರಡು ಉಪದೇಶದ ಮಾತಗಳನ್ನು ಹೇಳಲು ಬಯಸುತ್ತೇನೆ. ನಾನೊಬ್ಬ ವಟು. ನೀನು ನನ್ನಲ್ಲಿ ಇಷ್ಟೇಕೆ ಭೇದಭಾವ ವನ್ನು ತೋರಿಸುವೆ ? ನಿನ್ನ ಸಖಿಯರು ಹೇಳುವುದನ್ನು ಕೇಳಿ ನನಗೆ ಅವರ ಮಾತಿನಲ್ಲಿ ವಿಶ್ವಾಸವುಂಟಾಗುವುದಿಲ್ಲ. ಇದೇನು ಚೇಷ್ಟೆಯ ಮಾತೋ, ನಿಜವಾಗಿಯೂ ನೀನು ಇಂತಹ ತಪ್ಪು ಕಲ್ಪನೆಗೆ ಒಳಗಾಗಿರುವೆಯೋ ತಿಳಿಯಲಾರೆನು. ನಿಜವಾದ ಸಂಗತಿಯನ್ನು ನನ್ನೊಡನೆ ಮರೆಮಾಜದೆ ಉಸಿರುವೆಯೆಂದು ನಂಬಿ ಅದೇ ಪ್ರಶ್ನೆಯನ್ನು ಮತ್ತೊಮ್ಮೆ ಕೇಳುವೆನು. ನಿಜವಾಗಿಯೂ ನೀನು ಆ ಭೋಲಾನಾಥನಲ್ಲಿ ಅನುರಕ್ತೆಯೇನು ?

ಬ್ರಹ್ಮಚಾರಿಯ ಮಾತುಗಳನ್ನು ಕೇಳಿ ಪಾರ್ವತೀದೇವಿಗೆ ತುಂಬ ವ್ಯಸನವಾಯಿತು. ಮತ್ತು ಆತನ ಪ್ರಶ್ನೆಗೆ ಉತ್ತರವನ್ನು ಹೇಳಲು ನಾಚಿಕೆ

ಯಿಂದ ನಾಲಗೆ ಏಳದಂತಾಯಿತು. ಆಕೆ ತನ್ನ ಕೈಯಲ್ಲಿ ಹಿಡಿದಿರುವ ರುದ್ರಾಕ್ಷ ಮಾಲೆಯನ್ನು ದಿಟ್ಟಿಸಿ ನೋಡುತ್ತ ಕ್ಷಣಹೊತ್ತು ಸುಮ್ಮನೆ ನಿಂತುಕೊಂಡಳು; ಕೊನೆಗೆ ತನ್ನ ಮನೋವಿಕಾರವನ್ನು ಹತ್ತಿಕ್ಕಿಕೊಂಡು:- "ಬ್ರಾಹ್ಮಣ ಶ್ರೇಷ್ಠರೇ, ತಾವು ಸಕಲವನ್ನೂ ತಿಳಿದ ಜ್ಞಾನಿಗಳು. ತಮ್ಮ ಮುಂದೆ ಚೇಷ್ಟೆಯ ಮಾತುಗಳನ್ನಾಡುವುದಾಗಲಿ ಅಂತರಂಗದ ವಿಚಾರ ಗಳನ್ನು ಬಚ್ಚಿಟ್ಟುಕೊಳ್ಳುವುದಾಗಲಿ ತುಂಬ ಪಾಪಕರವಾಗಿರುವುದು. ನನ್ನ ಸಖಿಯರು ಹೇಳಿದ ಮಾತು ನಿಜ. ಯೋಗ್ಯವಾಗಲಿ, ಅಯೋಗ್ಯವಾಗಲಿ, ನಾನು ಅದೇ ಉದ್ದೇಶದಿಂದ ಇಲ್ಲಿಗೆ ಬಂದು ತಪಸ್ಸನ್ನು ಆರಂಭಿಸಿರುವೆನು." ಎಂದು ಮನಸ್ಸಿನ ದೃಢತೆಯನ್ನು ವ್ಯಕ್ತಪಡಿಸುತ್ತ ನುಡಿದಳು.

ಆಗ ಬ್ರಹ್ಮಚಾರಿಯು ದುಃಖವನ್ನು ಪ್ರಕಟಿಸುತ್ತ ಗಾಂಭೀರ್ಯ ಯುಕ್ತವಾದ ವಾಣಿಯಿಂದ:—" ನಾನು ಆ ಶಿವನನ್ನು ಚೆನ್ನಾಗಿ ಬಲ್ಲೆನು. ನೀನು ಆತನನ್ನು ಹೊಂದಿ ಯಾವ ಬಗೆಯಿಂದಲೂ ಸುಖವನ್ನು ಪಡೆಯ ಲಾರೆ. ಇಂದ್ರ, ವರುಣ, ಕುಬೇರ, ಮುಂತಾದ ಸಿರಿಸಂಪತ್ತುಗಳಿಂದ ಮೆರೆಯುತ್ತಿರುವ ದೇವತೆಗಳನ್ನೆಲ್ಲ ಬಿಟ್ಟು ನೀನು ಏನೆಂದು ಆ ಸಂನ್ಯಾಸಿ ಯನ್ನು ಮೋಹಿಸಿದೆಯೋ ಹೇಳಲಾರೆನು." ಎಂದು ನುಡಿದು ಸುಮ್ಮನಾ ದನು. ಮತ್ತು ಇದರಿಂದ ಪಾರ್ವತಿಯ ಮನಸ್ಸಿನ ಭಾವವೆಂತಾಗುವುದೆಂಬು ದನ್ನು ನೋಡುವ ಕುತೂಹಲದಿಂದ ಆಕೆಯ ಮುಖವನ್ನು ದಿಟ್ಟಿಸಿ ನೋಡ ತೊಡಗಿದನು. ಬ್ರಹ್ಮಚಾರಿಯ ಮಾತುಗಳನ್ನು ಕೇಳಿ ಪಾರ್ವತಿಯ ಲಜ್ಜಾ ವನತ ದೃಷ್ಟಿಯು ಕಿಂಚಿತ್ ರೋಷವನ್ನು ತೋರ್ಪಡಿಸಿತು; ನಾಚಿಕೆಯಿಂದ ಸಂಕುಚಿತವಾದ ಮುಖಭಾವವು ಕ್ರಮವಾಗಿ ಕ್ರೋಧವನ್ನು ವ್ಯಕ್ತ ಪಡಿಸಿತು.



## ಒಂಬತ್ತನೆಯ ಪರಿಚ್ಛೇದ

# ತಪಸ್ಸಾಫಲ್ಯ





ಹ್ಮಚಾರಿಯು ಪಾರ್ವತೀದೇವಿಯ ಮನೋಭಾವವನ್ನು ಕೆಲಪ
ಮಟ್ಟಿಗೆ ತಿಳಿದುಕೊಂಡನಾದರೂ ಆಕೆ ಇನ್ನೂ ಸುಮ್ಮನಿರುವುದನ
ನೋಡಿ "ಶುಭಾಂಗಿಯೇ, ಬಹು ವಿಧ ವಿಲಾಸಗಳ ಆಗರಗಳಂ
ರುವ ಅನೇಕಾನೇಕ ದೇವತೆಗಳ ಸಹವಾಸವನ್ನೆಲ್ಲ ತಿರಸ್ಕರಿಸಿ ನೀನು
ಶ್ಮಶಾನವಾಸಿಯೂ ಭಸ್ಮಪ್ರಿಯನೂ ಅಹಿಭೂಷಣನೂ ಆದ ಶಂಕರನನ
ಪ್ರೀತಿಸುವುದನ್ನು ಕಂಡು ನನಗೆ ತುಂಬ ಆಶ್ಚರ್ಯವಾಗುವುದು. ಶಿವನ
ಅಂತಹ ಗುಣವಾದರೂ ಏನಿರುವುದು ? ಅಂತಹ ಸೌಂದರ್ಯವಾದರ
ಎಲ್ಲಿದೆ ? ಲೋಕದಲ್ಲಿ ಎಲ್ಲರಿಗೂ ಎರಡು ಕಣ್ಣುಗಳಾದರೆ ಇವನಿಗೆ ಮೂರ
ಯದೊಂದು ಕಣ್ಣು, ಅದೂ ಹಣೆಯಲ್ಲಿ ! ಸಿರಿಸಂಪತ್ತುಗಳೋ ಎಂದರ
ಉಟ್ಟುಕೊಳ್ಳಲು ಬಟ್ಟೆಯೂ ಇಲ್ಲದೆ ದಿಗಂಬರನಾದನು ! ಭಿಕ್ಷಾನ್ನದಿಂ
ಜೀವನ ಸಾಗಿಸುವನು. ಆತನು ಯಾವಾಗ ಯಾರ ವಂಶದಲ್ಲಿ ಹುಟ್ಟಿ
ನೆಂಬುದೂ ಆತನ ತಂದೆತಾಯಿಗಳಾರೆಂಬುದೂ ಯಾರಿಗೂ ಗೊತ್ತಿಲ್ಲ. ನಿನ್ನ
ತಹ ಸೌಭಾಗ್ಯಾಲಂಕೃತಳಾದ ತನ್ವಂಗಿಯು ಒಂದು ವೇಳೆ ಅವನೊಡ
ಮದುವೆಯಾದರೆ ಜಗತ್ತಿನಲ್ಲಿ ವಿಚಿತ್ರವಾದೊಂದು ಘಟನೆಯು ಸಂಭವಿಸಿ
ನ್ನಬೇಕಾಗುವುದು. ನನ್ನ ಮನಸ್ಸಿಗಂತೂ ಈ ವಿಚಾರವು ತುಂಬ ವ್ಯಸ
ಕರವಾಗಿದೆ. ಯಾವ ನಿನ್ನ ಹಿತಶತ್ರುವು ಇಲ್ಲದ ಸಂಗತಿಗಳನ್ನು ಬಣ್ಣಿ
ಹೇಳಿ ನಿನ್ನ ಮನಸ್ಸಿನಲ್ಲಿ ಆ ಭೋಲಾನಾಥನ ವಿಷಯವಾಗಿ ಇಷ್ಟು ಪ್ರೀ
ಯನ್ನು ಹುಟ್ಟಿಸಿದನೋ ಅವನಿಗೆ ಇದರಲ್ಲಿ ಅಂತಹ ಸ್ವಾರ್ಥವಾದರೂ ಏ
ದ್ದಿತೋ ತಿಳಿಯದು. ಒಂದು ವೇಳೆ ನಿಜವನ್ನು ತಿಳಿಯಲಾರದೆ ಅನ್ಯ
ಮಾತಿನಲ್ಲಿ ನಂಬುಗೆಯಿಟ್ಟು ಇಂತಹ ಕಠೋರವಾದ ತಪಶ್ಚರ್ಯೆಯನ
ಮಾಡಿದೆಯಾದರೆ, ಆದದ್ದು ಆಗಿಹೋಯಿತು; ಇನ್ನು ಮುಂದೆಯಾದರ
ಯೋಗ್ಯವಾದ ಮಾರ್ಗವನ್ನು ಅವಲಂಬಿಸಿ ನಡೆ." ಎಂದನು.

ಪಾರ್ವತೀದೇವಿಗೆ ಇನ್ನು ಸಹಿಸಲಾಗಲಿಲ್ಲ. ಯಾವ ಪತಿನಿಂದೆಯನ್ನು ಸಹಿಸಲಾರದೆ ಆಕೆ ದಕ್ಷಬ್ರಹ್ಮನ ಯಜ್ಞಮಂಟಪದಲ್ಲಿ ತನ್ನ ಅವತಾರವನ್ನು ಮುಗಿಸಿ ಪುನರ್ಜನ್ಮ ತಾಳಿದಳೋ ಅದೇ ಪತಿನಿಂದೆಯನ್ನು ಈಗಲೂ ಕೇಳ ಬೇಕಾಯಿತಲ್ಲಾ ಎಂದು ಆಕೆ ಸಂತಾಪಗೊಂಡಳು; ಕೋಪದಿಂದ ಕಣ್ಣು ಗಳು ಕೆಂಪಡರಿದುವು; ಅವಯವಗಳೆಲ್ಲಾ ನಡುಗಹತ್ತಿದುವು; ತುಳಿದೆಬ್ಬಿಸಿದ ಸರ್ಪಿಣಿಯಂತೆ ಕೋಪಸಂತಪ್ತವಾದ ತನ್ನ ವಕ್ರದೃಷ್ಟಿಯಿಂದ ಬ್ರಹ್ಮಚಾರಿ ಯನ್ನು ದಿಟ್ಟಿಸಿ ನೋಡಿದಳು. ಮತ್ತು:—“ಯಾವಾತನಲ್ಲಿ ನನ್ನ ನಿಜವಾದ ಪ್ರೇಮವಿರುವುದೋ ಆತನನ್ನೇ ನಾನು ಪ್ರೀತಿಸುವೆನಲ್ಲದೆ ನಿಮ್ಮಂಥವರ ಹೇಳಿಕೆಗೆ ಎಂದೂ ಲಕ್ಷ್ಯಗೊಡಲಾರೆನು. ನೀವು ಬ್ರಹ್ಮಚಾರಿಗಳು. ನಿಮಗೆ ಇಂತಹ ವೃಥಾಲಾಪಗಳಿಂದ ಪ್ರಯೋಜನವೇನು? ನೀವು ಮಹೇಶ್ವರನ ಮಹಿಮೆಯನ್ನು ಅರಿಯಲಾರದೆ ಹೋದುದನ್ನು ನೋಡಿದರೆ ನಿಮ್ಮ ಬ್ರಹ್ಮ ಚರ್ಯೆಯೂ ಸಂನ್ಯಾಸವೂ ತೀರ ವ್ಯರ್ಥವೇ ಸರಿಯೆಂದು ತೋರುವುದು. ಭೂತನಾಥನ ಅಗಾಧವಾದ ಮಹಿಮೆಯನ್ನು ತಿಳಿಯಲಾರದೆ ದುರ್ವಾಕ್ಯ ಗಳಿಂದ ಆತನನ್ನು ನಿಂದಿಸುವ ಮೂಢನು ಅತಿ ದುಷ್ಟನು. ಅವನ ವಾಚಾಲ ತೆಗೆ ಧಿಕ್ಕಾರವಿರಲಿ.” ಎಂದು ನಿಷೇಧಿಸಿದಳು.

ಮತ್ತು “ತನ್ನ ದೃಷ್ಟಿಪಾತಮಾತ್ರದಿಂದ ಜಗತ್ತನ್ನೇ ವಿಪರ್ಯಸ್ತ ಮಾಡಬಲ್ಲ ಹರನು ಆಶಾಪಾಶರಹಿತನಾಗಿ ಪ್ರಪಂಚದ ಯಾವ ವಸ್ತುವನ್ನೂ ತನ್ನ ಸಂಗ್ರಹದಲ್ಲಿಟ್ಟು ಕೊಂಡಿರದಿದ್ದರೆ ಆತನು ದರಿದ್ರನೇ?

ಬ್ರಹ್ಮಚಾರಿಶ್ರೇಷ್ಠರೇ, ನಿಮ್ಮಂಥವರು ಸಕಲ ಸೃಷ್ಟಿಯ ವಿಧಾ ಯಕನಾದ ದೇವಾಧಿದೇವ ಮಹಾದೇವನ ಮಹಿಮೆಯನ್ನು ತಿಳಿಯಲಾರದೆ ಬಾಯಿಗೆ ಬಂದಂತೆ ಬಡಬಡಿಸುವುದನ್ನು ನೋಡಿ ನನಗೆ ಬಹು ದುಃಖವಾ ಗುವುದು. ನನ್ನ ಇಷ್ಟದೇವತೆಯ ನಿಂದೆಯನ್ನು ಕೇಳಿ ಸಿಟ್ಟು ಬಂದರೂ ನಿಮ್ಮ ಅಜ್ಞಾನವನ್ನು ನೋಡಿ ನನಗೆ ತುಂಬ ವಿಷಾದವಾಗುವುದು. ಹೀಗೆ ಸಕಲೇಷ್ಟಾರ್ಥದಾಯಕನಾದ ಶಂಕರನ ನಿಂದೆಯನ್ನು ಮಾಡಿ ನರಕದ ಮಾರ್ಗವನ್ನು ಹಿಡಿಯುವುದು ಸರಿಯಲ್ಲ. ನಿಮ್ಮ ಹೇಳಿಕೆಯಲ್ಲಿಯೇ ಒಂದು ಮಾತು ಹೊರಗೆ ಬಂದಿರುವುದು. ಆತನ ಹುಟ್ಟೂ ತಂದೆತಾಯಿಗಳೂ ಯಾರೆಂಬುದು ಗೊತ್ತಿಲ್ಲವೆಂದು ನೀವು ಹೇಳಿದ ಆ ಮಾತು ನಿಜವೇ ಸರಿ.

ಆದುದರಿಂದಲೇ ಆತನಿಗೆ **ಅಭವ**ನೆನ್ನುವರು. ಆತನು ಈ ವಿಶ್ವದ ಆ
ಪುರುಷನು. ಅಂದಬಳಿಕ ಆತನ ಹುಟ್ಟನ್ನು ತಿಳಿಯುವುದು ಯಾರಿಗೆ ತಾ
ಸಾಧ್ಯ?" ತನ್ನ ಅಂತರಂಗದ ಕೋಪಸಂತಾಪಗಳ ಆವೇಗವನ್ನು ಈ ರೀ
ಹೊರಚಲ್ಲಿ ದೇವಿಯು ಸ್ವಲ್ಪ ಶಾಂತಳಾದಳು

ಬ್ರಹ್ಮಚಾರಿಯು ಶಾಂತಭಾವದಿಂದ ಸುಮ್ಮನೆ ಕುಳಿತು ಪಾರ್ವ
ದೇವಿಯು ಕೋಪಾವೇಗದಿಂದ ನುಡಿಯುತ್ತಿರುವ ಮಾತುಗಳನ್ನು ಕೇಳು
ಲಿದ್ದನು. ದೇವಿಯು ಮತ್ತೆ ಮಾತಾಡತೊಡಗಿದಳು:— "ದೇವಾಧಿದೇ
ನಾದ ಶಂಕರನು ಎಂಥವನೆಂಬುದನ್ನು ನಾನು ನಿಮಗೆ ತಿಳಿಸಲಾರೆನು. ನೀ
ಹೇಳಿದಂತೆ ಆ ಮಹಾಮಹಿಮನು ಸಾಮಾನ್ಯನಾಗಿದ್ದರೂ ಆಗಿರಬಹುದು
ಅದರಿಂದ ನನಗೇನೂ ಕೊರತೆಯಿಲ್ಲ. ಆ ದಿವ್ಯಪುರುಷನ ವರಪವು ರತ್ನಾ
ಲಂಕಾರಗಳಿಂದ ಶೋಭಿಸುತ್ತಿದ್ದರೂ ಅಷ್ಟೇ; ಭಯಂಕರವಾದ ಕಾಳೋರ
ಗಳಿಂದ ಭೀಷಣವಾಗಿ ತೋರುತ್ತಿದ್ದರೂ ಅಷ್ಟೇ. ಆತನ ಶರೀರವು ರೇಶಿಮೆಯ
ಸುಂದರವಾದ ಬಟ್ಟೆಗಳಿಂದ ಒಪ್ಪುತ್ತಿದ್ದರೂ ಅಷ್ಟೇ; ಹುಲಿದೊಗಲಿನಿಂ
ವಿಕೃತವಾಗಿ ತೋರುತ್ತಿದ್ದರೂ ಅಷ್ಟೇ; ಯಕ್ಷಕರ್ದಮದಿಂದ ಘಮಘಮಿಸ
ತ್ತಿದ್ದರೂ ಅಷ್ಟೇ; ಚಿತಾಭಸ್ಮದಿಂದ ಬಳಿಯಲ್ಪಟ್ಟಿದ್ದರೂ ಅಷ್ಟೇ. ಆತ
ಹಣೆಯಲ್ಲಿ ಕಸ್ತೂರಿಯ ತಿಲಕವೇ ಇರಲಿ, ಉರಿಗಣ್ಣೇ ಇರಲಿ, ಕೊರಳ
ಮುತ್ತು ರತ್ನಗಳ ಅಲಂಕಾರವಿರಲಿ, ಮಸಣದ ಮೂಳೆಗಳ ಸರವು ಇರ
ಒಟ್ಟಿಗೆ ಆತನು ಯಾವ ವೇಷಭೂಷಣಗಳಿಂದ ಇರುತ್ತಿದ್ದರೂ ಅದನ
ನಾನು ನೋಡುವವಳಲ್ಲ. ಬಾಹ್ಯಾಂಗ ಸೌಂದರ್ಯಕ್ಕೂ ಅಸ್ಥಿರವಾ
ಸಿರಿಸಂಪತ್ತುಗಳಿಗೂ ಮೋಹಿತಳಾಗಿ ನಾನು ಆತನ ಪಾದಕಮಲಗ
ಸೇವೆಯನ್ನು ಬಯಸಿದವಳಲ್ಲ. ಆ ಮಹಾಮಹಿಮನ ಅಪಾರವಾದ ಶ
ಯನ್ನೂ ಆತನ ಯೋಗ್ಯತೆಯನ್ನೂ ನಾನು ಬಲ್ಲೆನು. ಎಂತಿದ್ದರೂ ಆತನ
ನನ್ನ ಸ್ವಾಮಿ, ಆತನೇ ನನ್ನ ಇಷ್ಟದೇವತೆ"

ಪಾರ್ವತೀದೇವಿಯ ಮನಸ್ಸಿನೊಳಗಿನ ಅವಿಚಲವಾದ ಭಕ್ತಿಭಾ
ವನ್ನು ಕಂಡು ಬ್ರಹ್ಮಚಾರಿಗೆ ಆದ ಆನಂದವನ್ನು ಬಣ್ಣಿಸಲಳವಲ್ಲ. ಆತ
ಅಂತರಂಗದ ಆ ಆನಂದಭಾವನೆ ಮುಖದಲ್ಲಿ ಹೊರಸೂಸುತ್ತಿದ್ದಿತು. ಅದ
ಪತಿನಿಂದೆಯನ್ನು ಕೇಳಿ ಮನಃಸ್ಥೈರ್ಯವನ್ನು ಕಳೆದುಕೊಂಡ ಪಾರ್ವ



एहि प्रिये मत्सकाशं पत्नी त्वं मे वरस्तव ।
त्वया साकं द्रुतं याम्ये स्वगृहं पर्वतोत्तमम ॥

**पार्वती तपस्साफल्य**

A 7520—Lakshmi Art, Bombay, 8.

ದೇವಿಗೆ ಆ ಬ್ರಹ್ಮಚಾರಿಯ ಮುಖವನ್ನು ನೋಡಲು ಇಷ್ಟವಿರಲಿಲ್ಲ. ದೇವಿಯ ಕೋಪವನ್ನು ಕಂಡು ಅಸಮಾಧಾನವನ್ನು ತಳೆದ ಸಖಿಯರೂ ಮುಂದೆ ಏನನರ್ಥವಾಗುವುದೋ ಎಂದು ಗಾಬರಿಯಾಗಿ ಕುಳಿತಿದ್ದರು.

ಪಾರ್ವತೀದೇವಿಯು ತಟ್ಟನೆ ತಿರುಗಿ ಬ್ರಹ್ಮಚಾರಿಯ ಕಡೆಗೆ ಬೆನ್ನು ಮಾಡಿ ಕುಳಿತು ತನ್ನ ಸಖಿಯರನ್ನು ಕುರಿತು:— "ದೇವಾಧಿದೇವನನ್ನು ನಿಂದಿಸುವ ಪಾಪಿಯ ಮುಖಾವಲೋಕನವು ಕೂಡ ಮಹಾಪಾಪಕರವಾಗಿರುವುದು; ಅತಿಥಿಯನ್ನು ಅವಮಾನಿಸುವುದು ಸರಿಯಲ್ಲವೆಂದು ಸುಮ್ಮನಿದ್ದೇನು; ಉಪಾಯವಿಲ್ಲ. ಅವರು ಇನ್ನೂ ಏನಾದರೂ ಮಾತಾಡಿ ನನ್ನ ಮನಸ್ಸನ್ನು ನೋಯಿಸುವಂತಿದ್ದರೆ ನಾನು ಈ ಸ್ಥಳವನ್ನು ಬಿಟ್ಟು ಹೋಗುವೆನು," ಎಂದಳು.

ಇದನ್ನು ಕೇಳಿ ಸಖಿಯರು ಚಂಚಲರಾಗಿರಲು ಬ್ರಹ್ಮಚಾರಿಯು ಎದ್ದುನಿಂತು ದೇವಿಯ ಸಮೀಪಕ್ಕೆ ನಡೆದನು. ಪಾರ್ವತೀದೇವಿಯು ತನ್ನ ಹಿಂಭಾಗದಲ್ಲಿ ಯಾರೋ ಬಂದಿರುವುದನ್ನು ತಿಳಿದು ತಿರುಗಿ ನೋಡಿದಳು. ತ್ರಿಶೂಲಧಾರಿಯೂ ನಾಗಾಭರಣನೂ ಗಂಗಾಧರನೂ ವ್ಯಾಘ್ರಚರ್ಮಾಂಬರಧಾರಿಯೂ ಆದ ದೇವಾಧಿದೇವ ಮಹಾದೇವನು ನಿಜರೂಪಧಾರಿಯಾಗಿ ಬಾಗಿ ನಿಂತು "ಪ್ರಿಯೇ, ಬಾ, ಇತ್ತಬಾ. ನಿನ್ನ ತಪಸ್ಸಿನಿಂದ ಸಂತುಷ್ಟನಾದೆನು. ಇಬ್ಬರೂ ಕೈಲಾಸಗಿರಿಗೆ ಹೊರಡೋಣ." ಎಂದನು.

ಯಾವ ಮಹಾಮಹಿಮನನ್ನು ಪಡೆಯುವುದಕ್ಕಾಗಿ ಬಹುಕಾಲದಿಂದ ತಪಸ್ಸನ್ನೂ ಅತಿಕಠೋರವಾದ ಜಪತಪ ಮೊದಲಾದುವುಗಳನ್ನೂ ನಡೆಯಿಸಿದ್ದಳೋ ಆ ದಯಾಘನನು ಇದಿರಿಗೆ ಬಂದು 'ಪ್ರಿಯೇ' ಎಂದು ಸಂಬೋಧಿಸುವುದನ್ನು ಕೇಳಿ ಪಾರ್ವತೀದೇವಿಗೆ ಎಷ್ಟು ಆನಂದವಾಯಿತೆಂಬುದನ್ನು ನಾವು ಬರೆದು ಬಣ್ಣಿಸಲಾರೆವು. ಆತನ ಮುಖದಿಂದ ಹೊರಡುವ ಪ್ರತಿ ಅಕ್ಷರವೂ ಆಕೆಯ ಅಂತರಂಗದಲ್ಲಿ ಮೂಡಿ ಮನಸ್ಸನ್ನು ಮೋಹಗೊಳಿಸಿತು. ಆಕೆ ತಟ್ಟನೆ ಎದ್ದು,

"ಭೀತಿರ್ನಾಸ್ತಿ ಭುಜಂಗಪುಂಗವ ವಿಷಾತ್ ಪ್ರೀತಿರ್ನ ಚಂದ್ರಾಮೃತಾ।
ನ್ನಾ ಶೌಚಂ ಹಿ ಕಪಾಲ ದಾಮ ಲುಲನಾಚ್ಛೌಚಂ ನ ಗಂಗಾಜಲಾತ್ ॥

ನೋದ್ವೇಗಶ್ಶಿತಿ ಭಸ್ಮನಾ ಸಹ ಸುಖಂ ಪತ್ನೀಸ್ತನಾಲಿಂಗನಾ- ।
ದಾತ್ಮಾರಾಮತಯಾ ಹಿತಾಹಿತ ಸಮಃಸ್ವಸ್ಥೋ ಹರಃ ಪಾತುವಃ ” ॥
ಎಂದು ಸ್ತುತಿಮಾಡಿ ಸಾಷ್ಟಾಂಗವೆರಗಿದಳು.

ಗಿರಿಜಾತೆಯ ಈ ಬಗೆಯ ಯಥಾರ್ಥವಾದ ಮನೋಭಾವವನ್ನೂ ತನಗೆ ಅನ್ವರ್ಥವಾಗಿರುವ ಸ್ತುತಿವಾಕ್ಯಗಳು ಆಕೆಯ ಮುಖದಿಂದ ಹೊ ಡುವುದನ್ನೂ ನೋಡಿ ಪರಮೇಶ್ವರನು ಅತುಲ-ಆನಂದವನ್ನು ತಳೆದ ಮತ್ತು:—“ದೇವೀ, ಅಮೋಘವಾದ ತಪಃಶಕ್ತಿಯಿಂದ ನೀನು ನನ್ನನ್ನ ಕೊಂಡುಕೊಂಡಿರುವೆಯಾದುದರಿಂದ ನಾನು ಇಂದಿನಿಂದ ನಿನ್ನ ದಾಸ್ಯವ ವಹಿಸಿರುವೆನು. ಹಿಂದಿನ ಸಕಲ ವಿಚಾರಗಳನ್ನೂ ಮರೆತು ಬಿಟ್ಟು ಕೈಲಾ ಗಿರಿಗೆ ಬಂದು ನನ್ನ ಸೇವೆಯನ್ನು ಸ್ವೀಕರಿಸುವೆಯಾದರೆ ನಾನು ಧನ್ಯ ಗುವೆನು.” ಎಂದು ವಿನಯಾದರಗಳನ್ನು ವ್ಯಕ್ತಪಡಿಸಿ ನುಡಿದನು.

ಭಕ್ತವತ್ಸಲನೂ ಭಕ್ತಾಧೀನನೂ ಭಕ್ತಪ್ರಿಯನೂ ಆದ ಭವನು ರೀತಿ ತನ್ನನ್ನು ಸ್ತುತಿಮಾಡುವುದನ್ನು ನೋಡಿ ಪಾರ್ವತೀದೇವಿಗೆ ಅತಿಶ ನಾಚಿಕೆಯಾಯಿತು. ಆಕೆ ಸಖಿಯರನ್ನು ನೋಡುತ್ತ “ನಾನು ಸ್ವತಂ ಳಲ್ಲ. ನನ್ನನ್ನು ಸಾಕಿ ಸಲಹಿದ ತಂದೆತಾಯಿಗಳು ನನ್ನ ವಿಯೋಗದಿ ಎಷ್ಟು ದುಃಖಿತರಾಗಿರುವರೋ ತಿಳಿಯದು. ಅವರನ್ನು ಕೇಳದೆ ನಾ ಯಾವ ಬಗೆಯಿಂದಲೂ ಸ್ವಾತಂತ್ರ್ಯದಿಂದ ನಡೆಯಲಾರೆನು. ಭಕ್ತವತ್ಸ ರಾದವರು ಭಕ್ತರ ಸಲುವಾಗಿ ಅಷ್ಟು ಶ್ರಮವನ್ನು ವಹಿಸುವರೆಂದು ನ ರುವೆನು.” ಎಂದು ನುಡಿದು ಲಜ್ಜಾವನತಮುಖಿಯಾಗಿ ಭೂಮಿಯನ್ನ ನೋಡುತ್ತ ನಿಂತಳು.

ದೇವಿಯು ಸಖಿಯರನ್ನು ಉದ್ದೇಶಿಸಿ ನುಡಿದ ಮಾತುಗಳನ್ನು ಕೇ ಪರಮೇಶ್ವರನು:—“ಪ್ರಿಯೇ, ಹಾಗೆಯೇ ಆಗಲಿ, ನಿನ್ನ ತಂದೆತಾಯಿ ಳನ್ನು ಕೇಳಿಯೇ ಮುಂದಿನ ಕಾರ್ಯಗಳು ನಡೆಯಲಿ. ಅವರ ಮನಸ್ಸ ನೋಯಿಸುವುದೂ ಸರಿಯಲ್ಲ. ಬಳ್ಳಿಯದು, ಹೋಗಿಬರುತ್ತೇನೆ.” ಎಂ ನುಡಿದು ಕೈಲಾಸಗಿರಿಯ ಮಾರ್ಗವನ್ನು ಹಿಡಿದು ನಡೆದನು.



# ಪರಿಸಮಾಪ್ತಿ





ಬಹುದಿನಗಳ ತರುವಾಯ ಕೈಲಾಸಗಿರಿಯಲ್ಲಿ ಜನಸಂಚಾರವಾಗತೊಡಗಿತು. ಅಭಿಮಾನಾಂಧನಾದ ದಕ್ಷನ ಯಜ್ಞದಲ್ಲಿ ಸತಿಯು ತನ್ನ ಅವತಾರವನ್ನು ಮುಗಿಸಿದ ವಾರ್ತೆ ಕೈಲಾಸಗಿರಿಗೆ ಮುಟ್ಟಿದೊಡನೆಯೇ ಶಂಕರನೂ ಆತನ ಗಣದವರೂ ಕೈಲಾಸಗಿರಿಯಿಂದ ಹೊರಟವರು ಇಂದಿನವರೆಗೆ ತಿರುಗಿ ಹೋಗಿರಲಿಲ್ಲ. ಇಂದು ಜಗತ್ಪತಿಯು ಪತ್ನಿಯ ತಪಸ್ಸಿನಿಂದ ಸಂತುಷ್ಟನಾಗಿ ಬ್ರಹ್ಮಚಾರಿಯ ವೇಷವನ್ನು ತಳೆದು ಗೌರೀಶೃಂಗಕ್ಕೆ ಹೋಗಿ ಆಕೆಯ ಮನಸ್ಸನ್ನು ಪರೀಕ್ಷಿಸುವ ನೆವದಿಂದ ಆಕೆಯ ಅತುಲವೂ ಅಚಲವೂ ಆದ ಶಿವಭಕ್ತಿಯನ್ನು ಜಗತ್ತಿಗೆ ತೋರ್ಪಡಿಸಿ ನಿಜರೂಪವನ್ನು ತೋರಿ ಆಕೆಯನ್ನು ಸಮಾಧಾನಪಡಿಸಿದ ತರುವಾಯ ತಿರುಗಿ ಕೈಲಾಸಗಿರಿಗೆ ಬಂದನು. ಶಂಕರನೊಡನೆ ಆತನ ಗಣಗಳೂ ನಂದಿಯೂ ತಿರುಗಿ ಬಂದರು. ಇಂದಿನವರೆಗೆ ನಿರ್ಜನ ಶ್ಮಶಾನದಂತಿದ್ದ ಕೈಲಾಸಗಿರಿಯು ಪುನಃ ಆನಂದಕೋಲಾಹಲದಿಂದ ಮೆರೆಯತೊಡಗಿತು.

ಇತ್ತ ಪಾರ್ವತೀದೇವಿಯು ತನ್ನ ಸಖಿಯರೊಂದಿಗೆ ಓಷಧಿಪ್ರಸ್ಥಪುರಕ್ಕೆ ಬಂದಳು. ಪರ್ವತರಾಜನೂ ಮೇನಾದೇವಿಯೂ ಮಗಳ ಬರವನ್ನು ಕಂಡು ಪುನರ್ಜೀವಿತರಾದಂತಾದರು. ಪಾರ್ವತೀದೇವಿಯ ಪುನರಾಗಮನದಿಂದ ಓಷಧಿಪ್ರಸ್ಥದಲ್ಲಿ ಎಲ್ಲೆಡೆಗೆ ಸುಖಸಂಪದಗಳೇ ವಿರಾಜಮಾನವಾಗಿ ನಗರವೆಲ್ಲ ಆನಂದದಿಂದ ನಗುವಂತೆ ತೋರತೊಡಗಿತು.

ಶಂಕರನು ಕೈಲಾಸಗಿರಿಗೆ ತಿರುಗಿ ಬಂದಿರುವ ವಾರ್ತೆಯನ್ನು ಕೇಳಿ ದೇವತೆಗಳಿಗೆ ತುಂಬ ಸಮಾಧಾನವಾಯಿತು. ಅವರು ಒಬ್ಬೊಬ್ಬರಾಗಿ ಅಲ್ಲಿಗೆ ಬಂದು ಶಿವನ ಪಾದಗಳಿಗೆರಗಿ ಸುಮ್ಮನೆ ಕುಳಿತುಕೊಂಡರು. ಇಂದ್ರನೂ ತನ್ನ ಪರಿವಾರದವರೊಡನೆ ಬಂದಿದ್ದನು. ಅವರೆಲ್ಲರ ಮನಸ್ಸಿನಲ್ಲಿ ತಮ್ಮ ಸಂಕಟ ನಿವಾರಣೆಗಾಗಿ ಶಂಕರನನ್ನು ಬೇಡಿಕೊಂಡು ಆತನಿಂದ

ಅಭಯವಚನವನ್ನು ಪಡೆದುಕೊಳ್ಳುವ ಕುತೂಹಲವು ತುಂಬಿತುಳುಕುತ್ತಿದ್ದಿ ತಾದರೂ ಏನೆಂದು ಸಂಭಾಷಣೆಯನ್ನು ಆರಂಭಿಸಬೇಕೆಂಬುದು ತಿಳಿಯದೆ ಇದ್ದುದರಿಂದ ಮನಸ್ಸಿನೊಳಗೆ ಕುದಿಯುತ್ತಿರುವ ಕುತೂಹಲವನ್ನು ಹತ್ತಿ ಕ್ಕಿಕೊಂಡು ಸುಮ್ಮನೆ ಕುಳಿತಿದ್ದರು. ಅಷ್ಟರಲ್ಲಿ ನಾರದರು ಅಲ್ಲಿಗೆ ಬಂದರು.

ನಾರದ ಮಹಾಮುನಿಗಳು ಬಂದುದನ್ನು ಕಂಡು ದೇವತೆಗಳಿಗೆ ತುಂಬ ಆನಂದವಾಯಿತು. ನಾರದರು ಒಮ್ಮೆ ದೇವತೆಗಳ ಮುಖವನ್ನು ನೋಡಿ ಮುಗುಳ್ನಗೆ ನಕ್ಕು "ನಿಮ್ಮ ಸಂಕಟನಿವಾರಣೆಯ ಸಮಯವು ಸಮೀಪಿ ಸಿತು" ಎಂಬ ಭಾವವನ್ನು ವ್ಯಕ್ತಪಡಿಸಿ ಮುಂದೆ ಹೋಗಿ ಪರಮೇಶ್ವರನ ಪಾದಗಳಿಗೆರಗಿ ಬಳಿಯಲ್ಲಿಯೇ ಕುಳಿತುಕೊಂಡರು. ಒಂದೆರಡು ಅತ್ತಿತ್ತಲಿನ ಸುಖಸಲ್ಲಾಪಗಳು ನಡೆದ ಬಳಿಕ ನಾರದರು ಕೈಲಾಸಗಿರಿಯ ಸಂಬಂಧದಿಂದ ನಾಲ್ಕು ಮಾತುಗಳನ್ನಾಡಿ ದೇವಲೋಕದಲ್ಲಿ ನಡೆದಿರುವ ತಾರಕಾಸುರನ ಹಾವಳಿಯನ್ನು ಬಣ್ಣಿಸಿ ದೇವತೆಗಳೆಲ್ಲರೂ ಇದಕ್ಕಾಗಿಯೇ ಇಲ್ಲಿಗೆ ಬಂದಿರುವ ರೆಂದೂ ಅವರ ದುಃಖನಿವಾರಣೆ ಪ್ರಥಮಕರ್ತವ್ಯವೆಂದೂ ಮಹಾದೇವನಿಗೆ ಬಿನ್ನವಿಸಿದರು. ಪರಮೇಶ್ವರನು ಏನು ಹೇಳುವನೋ ಎಂದು ದೇವತೆ ಗಳೆಲ್ಲರೂ ಸಾಶಂಕ ದೃಷ್ಟಿಯಿಂದ ಆತನನ್ನೇ ನೋಡುತ್ತಲಿದ್ದರು.

ದೇವತೆಗಳ ದುರವಸ್ಥೆಯನ್ನು ಕೇಳಿ ಶಂಕರನಿಗೆ ತುಂಬ ಕರುಣೆ ಬಂದಿತು. ತಾರಕಾಸುರನ ದುರಾಚಾರಕ್ಕಾಗಿ ಬಹು ಸಂತಾಪವೂ ಹುಟ್ಟಿತು. ಈ ಬಗೆಯಾಗಿ ಉಭಯ ಮನೋವಿಕಾರಗಳಿಂದ ಚಂಚಲನಾದ ಶಂಕರನು ನಾರದರನ್ನು ಕುರಿತು:—"ಲೋಕದಲ್ಲಿ ದುಷ್ಟರ ಪ್ರವೃತ್ತಿಯು ಯಾವಾ ಗಲೂ ದುಷ್ಕೃತ್ಯಗಳ ಕಡೆಗೇ ಇರುವುದು. ಪರಪೀಡೆಯು ಅವರಿಗೆ ಪುಣ್ಯಕರವಾದ ವ್ರತ. ಸಜ್ಜನರನ್ನು ಪೀಡಿಸಿ ಗೋಳಾಡಿಸುವುದೇ ತಮ ಗಿರುವ ಅಧಿಕಾರ ಸಾಮರ್ಥ್ಯಗಳ ನಿದರ್ಶನವೆಂದು ಅವರ ಭಾವನೆ. ದುಷ್ಟ ತಾರಕಾಸುರನ ನಾಶಕ್ಕೆ ಉಪಾಯವನ್ನೇನು ಕಲ್ಪಿಸಿರುವಿರಿ?" ಎಂದನು.

**ನಾರದ:**—ಭೋ, ವಿಶ್ವಾದ್ಯ, ವಿಶ್ವರೂಪ, ವಿರಾಟ್ ಪುರುಷನೇ, ನಿನ್ನ ಸಂಕಲ್ಪವನ್ನು ಪಾಮರನಾದ ನಾನೆಂತು ತಿಳಿಯುವೆನು? ಅಜ್ಞರಾದ ದೇವತೆ ಗಳೇನು ಬಲ್ಲರು?

ಶಂಕರನಿಗೆ ನಗೆ ಬಂದಿತು. ಆತನು:— “ಸರಿ. ಹೆಚ್ಚಿಗೆ ಮಾತಾಡಿ ಕಾಲಕಳೆಯುವುದರಿಂದ ಪ್ರಯೋಜನವೇನು? ಓಷಧಿಪ್ರಸ್ಥಪುರಕ್ಕೆ ಹೋಗಿ ಪರ್ವತರಾಜನ ಮತ್ತು ಮೇನಾದೇವಿಯ ಮನಸ್ಸನ್ನು ತಿಳಿದುಕೊಂಡು ಪಾರ್ವತೀದೇವಿಯೊಡನೆ ವಿವಾಹಸಂಬಂಧವನ್ನು ಬೆಳೆಯಿಸುವ ಕಾರ್ಯವು ನಿಮ್ಮನ್ನು ಕೂಡಿತು. ಕಾಲವು ಬಂದೊಡನೆಯೇ ಸಕಲವೂ ತಾನಾಗಿಯೇ ಕೂಡಿಬರುವುದು. ದೇವತೆಗಳು ಚಿಂತಿಸುವ ಕಾರಣವಿಲ್ಲ. ಈಗ ಅವರಿಗೆ ವಿಪತ್ಕಾಲವೂ ತಾರಕಾಸುರನಿಗೆ ಸಂಪತ್ಕಾಲವೂ ಬಂದಿವೆ. ಕಡೆತನಕ ಇದೇ ಸ್ಥಿತಿ ಉಳಿಯಲಾರದು.” ಎಂದನು.

ಇದನ್ನು ಕೇಳಿ ದೇವತೆಗಳು ಪರಮಹರುಷಿತರಾಗಿ:— “ಭೋ! ದೇವಾಧಿದೇವ! ನೀನು ಹೇಳುವ ಮಾತು ಸತ್ಯವೇ ಸರಿ. ನೀನು ಸರ್ವತಂತ್ರಸ್ವತಂತ್ರನು. ಜಗತ್ತಿನ ವಿಧಾಯಕನಾದ ನಿನ್ನ ಕರುಣೆಯೇ ನಮಗೆ ಮುಖ್ಯವಾದುದು. ನಿನ್ನ ದಯೆಗೆ ಪಾತ್ರರಾದವರಿಗೆ ಸದಾನುದಿನವೇ ಸರಿ. ನಮ್ಮ ಸುಖದುಃಖಗಳು ನಿನ್ನನ್ನೇ ಕೂಡಿರುವುವು.” ಎಂದು ಬಹು ವಿನಯದಿಂದ ಬೇಡಿಕೊಂಡಬಳಿಕ ದೇವತೆಗಳು ದೇವಲೋಕಕ್ಕೆ ಹೋದರು. ನಾರದರು ಓಷಧಿಪ್ರಸ್ಥಪುರಕ್ಕೆ ಬಂದರು. ಅತ್ತ ಮಹಾದೇವನು ತನ್ನ ಅರ್ಧಶಕ್ತಿಯು ಹಿಮಾಚಲದಲ್ಲಿ ಉಳಿದು ಮನಃಶಾಂತಿಯಿಲ್ಲದೆ ನಿತ್ಯಕಾರ್ಯದಲ್ಲಿ ತೊಡಗಿದನು.

ಪರ್ವತರಾಜನೂ ಮೇನಾದೇವಿಯೂ ನಾರದರ ಮಧ್ಯಸ್ಥಿಕೆಯಿಂದ ಪಾರ್ವತೀ ಪರಮೇಶ್ವರರವಿವಾಹವನ್ನು ನಿಶ್ಚಯಿಸಿದರು. ವಿರಕ್ತನಾದ ಮಹಾದೇವನು ಪುನಃ ಸಂಸಾರವನ್ನು ಸೇರಿ ಸೃಷ್ಟಿಯ ಕಲ್ಯಾಣಕಾರ್ಯದಲ್ಲಿ ತೊಡಗಿದುದರಿಂದ ಜಗತ್ತಿಗೇ ಆನಂದವಾಯಿತು. ಗಿರಿರಾಜನಿಗೂ ಮೇನಾದೇವಿಗೂ ಜಗತ್ತಿನ ಆದಿಪುರುಷನು ತಮ್ಮ ಜಾಮಾತನಾಗುವನೆಂಬ ಭಾವನೆಯಿಂದ ಪರಮ ಹರುಷವಾಯಿತು. ಅವರು ತಮ್ಮ ಕುಲವು ಉದ್ಧಾರವಾಯಿತೆಂದೂ ತಾವು ಜಗತ್ತಿನಲ್ಲಿ ಜನ್ಮವೆತ್ತಿದ್ದರ ಸಾಫಲ್ಯವಾಯಿತೆಂದೂ ಭಕ್ತವತ್ಸಲನಾದ ಶಂಕರನ ಪರಮಾನುಗ್ರಹದಿಂದ ತಾವು ಭವಸಾಗರದಿಂದ ಉದ್ಧಾರವಾದೆವೆಂದೂ ಭಾವಿಸಿ ಆತನ ಪಾದಗಳನ್ನು ಅನನ್ಯಭಾವದಿಂದ ಸ್ಮರಿಸಿದರು.